# ಆಮುಖ

ರತ ಸರ್ಕಾರದ ಪ್ರಾಚ್ಯ ಸಂಶೋಧನಾ ವಿಭಾಗವು ಕಳೆದ ಆರು ವರುಷಗಳಿಂದಲೂ "ಇಂಡಿಯನ್ ಆರ್ಕಿಯಾಲಜಿ--ಏ ರಿವ್ಯೂ" (Indian Archaeology—A eview) ಎಂಬ ವಾರ್ಷಿಕ ಸಂಚಿಕೆಯೊಂದನ್ನು ಪ್ರಕಟಿಸುತ್ತಿದೆ. ಇಲಾಖೆಯ ಅಧಿಕಾರಿ ಳಲ್ಲದೆ ಇತರ ಪ್ರಾಕ್ತನ ವಿಚಕ್ಷಣಗಳು ಒದಗಿಸಿಕೊಟ್ಟ ವಿಷಯಗಳನ್ನೊಳಗೊಂಡ ಈ ಂಚಿಕೆಯಲ್ಲಿ ಪ್ರತಿ ವರುಷವೂ ದೇಶಾದ್ಯಂತವಾಗಿ ನಡೆಸಿದ ಪುರಾತತ್ವ ಸಂಶೋಧನೆಗಳನ್ನು ಳಿಯಬಹುದು.

ಇದೇ ತಿಂಗಳ ಪ್ರಾರಂಭದಲ್ಲಿ ಭಾರತ ಸರ್ಕಾರದ ವಿಜ್ಞಾನ ಸಂಶೋಧನೆ ಮತ್ತು ಸಾಂಸ್ಕೃತಿಕ ವಿಷಯಗಳಿಗೆ ಸಚಿವರಾದ ಪ್ರೊಫೆಸರ್ ಹುಮಾಯೂನ್ ಕಬೀರ್‌ರವರು "ರಿವ್ಯೂ" (Review)ನ್ನು ಭಾರತದ ಹದಿಮೂರು ಭಾಷೆಗಳಲ್ಲಿಯೂ ಸಂಕ್ಷಿಪ್ತವಾಗಿ ತರ್ಜಿಮೆ ಮಾಡಿಸಿ ನಮ್ಮ ದೇಶದಲ್ಲಿ ಸರ್ವರಿಗೂ ಪುರಾತತ್ವ ವಿಷಯವು ತಿಳಿಯುವಂತೆ ಮಾಡಬೇಕೆಂದು ಅಭಿಪ್ರಾಯಪಟ್ಟರು. ಸಮರ್ಥರಾದ ಅನುವಾದಕರು ಆಂಗ್ಲಭಾಷೆಯಿಂದ ಇತರ ಭಾರತೀಯ ಭಾಷೆಗಳಿಗೆ ತರ್ಜಿಮೆ ಮಾಡಲು ಸಹಾಯವಾಗುವಂತೆ ಆಂಗ್ಲಭಾಷೆಯಲ್ಲಿ ಮಾದರಿಯಾದ ಸಂಚಿಕೆಯೊಂದನ್ನು ನಾನು ತಯಾರಿಸಬೇಕೆಂದು ಅವರು ನಿರ್ದೇಶಿಸಿದರು.

ಭಾರತದಲ್ಲಿ ಪ್ರಾಚ್ಯ ಸಂಶೋಧನೆಯು ಎಷ್ಟರಮಟ್ಟಿಗೆ ಪ್ರತಿ ವರುಷವೂ ಮುಂದುವರಿಯುತ್ತಿದೆ ಎಂಬುದನ್ನು ಜನರ ಗಮನಕ್ಕೆ ತರುವುದರ ಮೊದಲು ಸಂಶೋಧನೆಯ ಹಿನ್ನೆಲೆಯನ್ನು ತಿಳಿಸಬೇಕಾಗಿದೆ. ಆದಕಾರಣ ಈ ಪುಸ್ತಕದ ಮೊದಲನೇ ನಾಲ್ಕು ಅಧ್ಯಾಯಗಳು ಪೀಠಿಕೆಯಾಗಿ ಹೆಚ್ಚೆಂದು ಕಂಡುಬಂದರೂ ಪುರಾತತ್ವದ ಪ್ರಗತಿಯನ್ನು ತಿಳಿಯಲು ಇದು ಅವಶ್ಯಕವೆಂದು ನನ್ನ ಅಭಿಪ್ರಾಯ. ಮುಂದೆಬರುವ ಸಂಚಿಕೆಗಳಲ್ಲಿ ವಾರ್ಷಿಕ ವರದಿಯನ್ನು ಮಾತ್ರ ವಿಮರ್ಶಿಸಲಾಗುತ್ತೆ.

ಈ ಪುಸ್ತಕದ ಮೊದಲನೆ ಅಧ್ಯಾಯವು ಕ್ರಿ.ಶ. ೧೯೦೨ಕ್ಕೆ ಮುಂಚಿನ ಭಾರತೀಯ ಪುರಾತತ್ವದ ಇತಿಹಾಸವನ್ನು ತಿಳಿಸುತ್ತದೆ. ಇದನ್ನು ಸೌರೀಂದ್ರನಾಥ್‌ರಾಯ್‌ರವರು ಏನ್ಷಂಟ್ ಇಂಡಿಯಾದ ಒಂಭತ್ತನೇ ಅಂಕದಲ್ಲಿ (Ancient India, No. 9, 1953) ಬರೆದಿರುವ "ಜೋನ್ಸ್‌ನಿಂದ ಮಾರ್ಷಲ್ ವರೆಗಿನ ಭಾರತ ಪುರಾತತ್ವ" ಎಂಬ ಲೇಖನದ ಆಧಾರದ ಮೇಲೆ ಬರೆಯಲಾಗಿದೆ.

ನನಗೆ ತಿಳಿದಮಟ್ಟಿಗೂ ಈ ಪುಸ್ತಕದಲ್ಲಿ ಅಡಳಿತ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ಆಂಗ್ಲ ಭಾಷೆಯ ವೈಶಿಷ್ಟ ಪದಗಳನ್ನು ಇದುವರೆವಿಗೂ ಯಾರೂ ಭಾರತದ ಇತರ ಭಾಷೆಗಳಲ್ಲಿ ಪ್ರಮಾಣಬದ್ಧವಾಗಿ ಪರಿವರ್ತಿಸಿಲ್ಲ. ಆದ್ದರಿಂದ ಈ ಪುಸ್ತಕದ ಅನುವಾದಕರ ಕಾರ್ಯವು ಸುಲಭ ಸಾಧ್ಯವಾದದ್ದಲ್ಲ. ಆದರೂ ಅವರು ತಮ್ಮ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸುವರೆಂದು ನನಗೆ ಪೂರ್ಣ ವಿಶ್ವಾಸವಿದೆ.

15ನೆಯ ಅಕ್ಟೋಬರ್ 1959,
ನವದೆಹಲಿ.

ಅಮಲಾನಂದ ಘೋಷ್

# ವಿಷಯಾನುಕ್ರಮಣಿಕೆ



# ಭಾರತೀಯ ಪುರಾತತ್ವ

## 1902ಕ್ಕೆ ಮುಂಚೆ

### ೧

ಹದಿನೆಂಟನೆ ಶತಮಾನದ ಕೊನೆಯಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಗಳ ಲಕ್ಷ್ಯ ಭಾರತದ ಪ್ರಾಚೀನವಸ್ತುಗಳ ಸಂಪತ್ತಿನ ಕಡೆಗೆ ಸೆಳೆಯಲ್ಪಟ್ಟಿತು. ಏಷ್ಯಾ ಖಂಡದ ಇತಿಹಾಸ, ಪ್ರಾಚೀನಾವಶೇಷ, ಕಲೆ, ವಿಜ್ಞಾನ, ಸಾಹಿತ್ಯ ಇವೇ ಮೊದಲಾದುವುಗಳಲ್ಲಿ ಸಂಶೋಧನೆಯನ್ನು ನಡೆಸಲು 1784ರಲ್ಲಿ ಸುಪ್ರೀಂ ಕೋರ್ಟಿನ ನ್ಯಾಯಾಧೀಶರಾದ ಸರ್ ವಿಲಿಯಂ ಜೋನ್ಸ್‌ರು ಕೊಟ್ಟ ಪ್ರೋತ್ಸಾಹದಿಂದ ಅವರ ನೇತೃತ್ವದಲ್ಲಿ ಏಷ್ಯಾಟಿಕ್ ಸೊಸೈಟಿ ಎಂಬ ಸಂಸ್ಥೆ ಸ್ಥಾಪಿಸಲ್ಪಟ್ಟಿತು. ಗವರ್ನರ್ ಜನರಲ್‌ರಾದ ವಾರನ್ ಹೇಸ್ಟಿಂಗ್ಸ್‌ರವರು ಕೂಡ ಸಂಸ್ಥೆಯ ಸ್ಥಾಪಕರಲ್ಲೊಬ್ಬರು. ಡಾಕ್ಟರ್ ಜಾನ್ಸನ್‌ರು ಇವರಿಗೆ ಬರೆದ ಪತ್ರವೊಂದರಲ್ಲಿ "ಪೂರ್ವದೇಶಗಳ ಸಂಪ್ರದಾಯ ಮತ್ತು ಇತಿಹಾಸಗಳನ್ನು ಕೂಲಂಕುಷವಾಗಿ ಪರೀಕ್ಷಿಸುವಂತೆಯೂ, ಪ್ರಾಚೀನಕಟ್ಟಡಗಳ ಅವಶೇಷಗಳನ್ನು ಪರಿಶೀಲಿಸಬೇಕೆಂತಲೂ ಮತ್ತು ಪ್ರಾಚೀನ ನಗರಗಳ ಭಗ್ನಾವಶೇಷಗಳನ್ನು ಶೋಧಿಸಬೇಕೆಂದೂ" ಒತ್ತಾಯಪಡಿಸಿದ್ದರು. ಸೊಸೈಟಿಯ ಸ್ಥಾಪನೆಯಿಂದ ಏಷ್ಯಾಖಂಡಕ್ಕೆ ಸಂಬಂಧಿಸಿದ ವಿಷಯಗಳ ವಿದ್ಯಾಭ್ಯಾಸಕ್ಕೆ ಉತ್ತೇಜನ ದೊರೆಯಿತು. ೧೭೮೮ರಲ್ಲಿ 'ಏಷ್ಯಾಟಿಕ್ ರಿಸರ್ಚಸ್' ಎಂಬ ಪತ್ರಿಕೆಯೊಂದನ್ನು ಹೊರಡಿಸಿದ್ದಲ್ಲದೆ, ೧೮೧೪ರಲ್ಲಿ ಸೊಸೈಟಿಯ ಸದಸ್ಯರು ಶೇಖರಿಸಿದ ವಸ್ತುಗಳನ್ನಿಡಲು ಒಂದು ಸಂಗ್ರಹಾಲಯವೂ ಸ್ಥಾಪಿಸಲ್ಪಟ್ಟಿತು.

ಆದರೆ ಸೊಸೈಟಿಯ ಚಟುವಟಿಕೆಗಳಲ್ಲಿ ಪ್ರಾಚೀನಾವಶೇಷಗಳ ಶೋಧನೆ ಮತ್ತು ಅಭ್ಯಾಸವೆನ್ನುವ ಅರ್ಥದಲ್ಲಿ ಪುರಾತತ್ವಕ್ಕೆ ಹೆಚ್ಚು ಸ್ಥಳವಿರಲಿಲ್ಲ. ಆಗಿನ ಕಾಲಕ್ಕೆ ಕೈಗೊಂಡ ಪ್ರಾಚ್ಯವಸ್ತು ಸಂಶೋಧನೆ ಎಂದರೆ ಸ್ಮಾರಕಗಳ ಸಂಬಂಧವಾದ ವರದಿಗಳೇ. ಪುರಾತತ್ವವು ಇನ್ನೂ ಶಾಸ್ತ್ರರೀತಿಯಲ್ಲಿರದೆ ದಂತಕಥೆಗಳನ್ನೊಳಗೊಂಡು ಆಶ್ಚರ್ಯ ಜನಕವಾದ ವಿಷಯಗಳಿಂದ ತುಂಬಿತ್ತೆಂದು ಈ ವರದಿಗಳಿಂದ ತಿಳಿದುಬರುತ್ತದೆ. ಇಷ್ಟಾದರೂ ಕೆಲವು ಶ್ಲಾಘನೀಯವಾದ ಕಾರ್ಯಗಳು ನಡೆದವು. ಉದಾಹರಣೆಗಾಗಿ, ೧೭೮೮ರಲ್ಲಿ ಛಾರ್ಲ್ಸ್ ವಿಲ್ಕಿನ್ಸರು ಗುಪ್ತ ಮತ್ತು ಕುಟಿಲ ಲಿಪಿಗಳ ಮರ್ಮವನ್ನು ಕಂಡು ಹಿಡಿದರು. ಆಫ್‌ಘಾನಿಸ್ಥಾನದಲ್ಲಿ ಹೊರೇಸ್ ಹೇಮನ್ ವಿಲ್ಸನ್‌ರು ಕೈಗೊಂಡ ಪ್ರಾಚೀನಾವಶೇಷಗಳ ಅನ್ವೇಷಣವು ಪ್ರಖ್ಯಾತವಾದುದಲ್ಲದೇ ಅವರ ವರದಿಯೂ ಕೂಡ ಆ ಕಾಲಕ್ಕೆ ಶ್ಲಾಘನೀಯವಾಗಿತ್ತು.

೧೮೦೦ರಲ್ಲಿ ಲಾರ್ಡ್ ವೆಲ್ಲೆಸ್ಲಿಯವರು ಫ್ರಾನ್ಸಿಸ್ ಬುಕಾನೆನ್‌ರನ್ನು ಮೈಸೂರು ಸಂಸ್ಥಾನದ ಪ್ರಾಚೀನಾವಶೇಷಗಳ ಪರಿಶೋಧನೆಗಾಗಿ ಕಳುಹಿಸಿಕೊಟ್ಟರು. ಪುನಃ ೧೮೦೭ರಲ್ಲಿ ಬಂಗಾಳಾದ ಸ್ಥಳ ವರ್ಣನೆ, ಇತಿಹಾಸ ಮತ್ತು ಪ್ರಾಕ್ತನಾವಶೇಷಗಳನ್ನು ಪರಿಶೋಧಿಸಲು ಬುಕಾನನ್ನರೇ ಕಳುಹಿಸಲ್ಪಟ್ಟರು. ಅಲ್ಲಿಂದ ಎಂಟು ವರುಷಗಳವರೆಗೆ ಅವರು ದಿನಜ್‌ಪುರ,

ರಂಗಪುರ, ಪೂರ್ಣಿಯ, ಭಾಗಲ್ಪುರ್, ಪಾಟ್ನ, ಬಿಹಾರ್, ಷಹಬಾದ್ ಮತ್ತು ಗೋರಖಪುರ ಜಿಲ್ಲೆಗಳಲ್ಲಿ ಪರಿಶೋಧನೆ ಮಾಡಿದರು. ಅವರು ವರದಿಗಳನ್ನು ಪ್ರಕಟಿಸದಿದ್ದರೂ ಮಾಂಟ್ಗೊಮರೀ ಮಾರ್ಟಿನ್ನರು ೧೮೩೮ರಲ್ಲಿ ಹೊರಗೆಡಹಿದ ಅಲ್ಪ ಸ್ವಲ್ಪ ವರದಿಯಿಂದ ಬುಕಾನನ್ನರ ತೀಕ್ಷ್ಣ ಮತ್ತು ಸಮಂಜಸವಾದ ಪರಿಶೀಲನಾ ಶಕ್ತಿಯು ತಿಳಿದು ಬರುತ್ತದೆ.

೧೮೩೭ರಲ್ಲಿ ಕಲ್ಕತ್ತ ಟಂಕಸಾಲೆಯ ಅಸ್ಸೆಮಾಸ್ಟರ್ ಆದ ಜೇಮ್ಸ್ ಪ್ರಿನ್ಸೆಪರು ಬ್ರಾಹ್ಮಿಲಿಪಿಯ ರಹಸ್ಯವಾದ ತೊಡಕನ್ನು ಬಿಡಿಸಿದರು. ಅನಂತರ ಅಶೋಕನ ಶಾಸನಗಳು ಓದಲ್ಪಟ್ಟಿದ್ದರಿಂದ, ಅಶೋಕನು ತನ್ನ ಶಾಸನಗಳಲ್ಲಿ ತಿಳಿಸಿದ ಯವನ ರಾಜರ ಸಮಕಾಲೀನನೆಂದು ನಿರ್ಧರವಾಯಿತು. ಇದು ಭರತಖಂಡದ ಆದ್ಯ ಇತಿಹಾಸದ ಕಾಲಗಣನೆಗೆ ಭದ್ರವಾದ ಆಧಾರವಾಯಿತು.

ಈ ಅವಧಿಯಲ್ಲಿ ಎಂದರೆ ೧೮೨೯ ರಿಂದ ೧೮೪೭ರವರೆಗೆ ಹದಿನೆಂಟು ವರುಷಗಳ ಕಾಲ ಜೇಮ್ಸ್ ಫರ್ಗ್ಯೂಸನ್‌ರು ನಮ್ಮ ದೇಶದ ವಾಸ್ತುಶಿಲ್ಪ ಪರಿಶೋಧನೆ ಮಾಡಿದುದಲ್ಲದೆ ಪ್ರಾಚೀನ ಸ್ಮಾರಕಗಳನ್ನು ಕ್ರಮಬದ್ಧವಾಗಿ ವರ್ಗೀಕರಿಸಿ ಪ್ರಖ್ಯಾತಿ ಹೊಂದಿದರು.

ಇದುವರೆವಿಗೆ ಸರ್ಕಾರವು ಬುಕಾನನ್ನರನ್ನು ನೇಮಿಸುವುದು ಅಥವಾ ಆಗಾಗ್ಯೆ ಆಗ್ರ ಮತ್ತು ದೆಹಲಿಯ ಸ್ಮಾರಕಗಳನ್ನು ದುರಸ್ತು ಮಾಡಿಸುವುದು ಹೊರತು ಇನ್ನಾವ ಪುರಾತತ್ತ್ವ ವಿಷಯಗಳಲ್ಲೂ ಆಸಕ್ತಿ ತೋರಿಸಿರಲಿಲ್ಲ.

೧೮೪೪ರಲ್ಲಿ ಗ್ರೇಟ್ ಬ್ರಿಟನ್ನಿನ ರಾಯಲ್ ಏಷ್ಯಾಟಿಕ್ ಸೊಸೈಟಿಯು ಅಜಂತ ಗುಹಾಂತರ್ದೇವಾಲಯಗಳಲ್ಲಿರುವ ಚಿತ್ರಗಳನ್ನು ನಕಲು ಮಾಡಿಸಬೇಕೆಂದೂ ಮತ್ತು ಗುಹಾಲಯಗಳನ್ನು ಸಂರಕ್ಷಿಸಬೇಕೆಂದು ಕೇಳಿಕೊಂಡಿದ್ದರಿಂದ, ಈಸ್ಟ್ ಇಂಡಿಯಾ ಕಂಪನಿಯ ಡೈರೆಕ್ಟರ್‌ಗಳ ಕೋರ್ಟು ಹಾಲಿಯಿರತಕ್ಕ ಪ್ರಾಚೀನ ಸ್ಮಾರಕಗಳ ಸ್ವಭಾವ, ಪರಿಮಾಣ ಮತ್ತು ಸ್ಥಿತಿಯ ಬಗ್ಗೆ ಯಥಾರ್ಥ ವಿಷಯಗಳನ್ನು ಸಂಗ್ರಹಿಸಲು ಸಮಿತಿಯೊಂದನ್ನು ರಚಿಸಿದರು. ಸಮಿತಿಯನ್ನು ನೇಮಿಸುವುದಕ್ಕೆ ಮೊದಲು ಸ್ಮಾರಕಗಳ ವಿಷಯವಾಗಿ ಸಮರ್ಥರಾದ ಪುರಾತತ್ತ್ವ ವಿದ್ವಾಂಸರಿಂದ ವರದಿಗಳು ತಯಾರಿಸಲ್ಪಡಬೇಕೆಂದು ಲಾರ್ಡ್ ಹೇಸ್ಟಿಂಗ್ಸ್‌ರು ಅಭಿಪ್ರಾಯಪಟ್ಟರು. ಆದಕಾರಣ ಕೆಲವು ಸ್ಮಾರಕಗಳ ಪರಿಶೋಧನೆಗಾಗಿ ಅಧಿಕಾರಿಗಳನ್ನು ಮಾತ್ರ ನೇಮಿಸಿದರು.

೨

೧೮೬೧ರಲ್ಲಿ ಪ್ರಾಚ್ಯವಿದ್ಯಾ ಸಂಶೋಧನೆ ಕಾರ್ಯಗಳಲ್ಲಿ ಪ್ರಖ್ಯಾತಿ ಹೊಂದಿ ಮತ್ತು ಸೈನ್ಯದಲ್ಲಿ ಇಂಜನಿಯರ್ ಆಗಿದ್ದ ಅಲೆಕ್ಸಾಂಡರ್ ಕನ್ನಿಂಗ್‌ಹ್ಯಾಮ್‌ರು ದೇಶಾದ್ಯಂತ್ಯವೂ ಪ್ರಾಚೀನಾವಶೇಷಗಳ ಅನ್ವೇಷಣೆಯನ್ನು ಸೂಕ್ತವಾಗಿ ಕೈಗೊಂಡು, ಆಗಿನ ಶೋಚನೀಯ ಪರಿಸ್ಥಿತಿಯನ್ನು ಕೊನೆಗಾಣಿಸಬೇಕೆಂದು ಗವರ್ನರ್‌ಜನರಲ್ ಲಾರ್ಡ್ ಕ್ಯಾನಿಂಗ್‌ರಿಗೆ ನಿವೇದಿಸಿದರು. ಇವರ ಸಲಹೆಯನ್ನು ಅಂಗೀಕರಿಸಿ ಕ್ಯಾನಿಂಗ್‌ರು ಕನ್ನಿಂಗ್‌ಹ್ಯಾಮರನ್ನೆ ಪುರಾತತ್ತ್ವ ಶಾಖೆಯ ಸರ್ವೇಯರ್ ಆಗಿ ನೇಮಿಸಿ, "ಆರ್ಕಿಯಲಾಜಿಕಲ್ ಸರ್ವೇ ಆಫ್ ಇಂಡಿಯಾ" (ಭಾರತೀಯ ಪುರಾತತ್ತ್ವ ವಿಭಾಗ) ಒಂದನ್ನು ಸ್ಥಾಪಿಸಿದರು. ಸರ್ಕಾರವು ದೇಶದಲ್ಲಿರತಕ್ಕ ಪ್ರಾಚೀನ ಸ್ಮಾರಕಗಳ ಮತ್ತು ಸ್ಥಳಗಳ ಬಗ್ಗೆ ತನ್ನ ಜವಾಬ್ದಾರಿಯನ್ನು

ಸ್ವಾಮ್ಯಯುವಾಗಿ ಒಪ್ಪಿಕೊಂಡಿದುದು ಇವೇ ಮೊದಲು. ಆದರೂ ಸ್ಮಾರಕಗಳನ್ನು ಸಂರಕ್ಷಿಸುವುದು ಇನ್ನೂ ಈ ವಿಭಾಗದ ಕಾರ್ಯವಾಗಿರಲಿಲ್ಲ.

ಚೀಣೀ ಯಾತ್ರಿಕರಾದ ಫಾಹಿಯಾನ್ ಮತ್ತು ಹ್ಯೂಯಂತ್ಸಾಂಗ್‌ರ ಲೇಖನಗಳನ್ನು ಅನುಸರಿಸಿ ಕನ್ನಿಂಗ್‌ಹ್ಯಾಮರು ೧೮೬೧ನೇ ನವೆಂಬರ್‌ನಿಂದ ೧೮೬೫ನೇ ಜನವರಿವರೆಗೆ ಉತ್ತರ ಹಿಂದೂಸ್ಥಾನದ ಅನೇಕ ಭಾಗಗಳಲ್ಲಿ ಪ್ರಯಾಣಮಾಡಿ ಅಸಂಖ್ಯಾತ ಸ್ಮಾರಕಗಳನ್ನು ಮತ್ತು ಅವಶೇಷಗಳನ್ನು ಪರಿಶೋಧಿಸಿ, ಸಚಿತ್ರವಾದ ಪರಿಷ್ಕೃತ ವರದಿಗಳನ್ನು ಒಪ್ಪಿಸಿದರು. ದುರಾದೃಷ್ಟವಶಾತ್ ೧೮೬೫ರಲ್ಲಿ ಸರ್ಕಾರವು ಯಾವುದೋ ನೆಪದಿಂದ ಪುರಾತತ್ವ ವಿಭಾಗವನ್ನು ರದ್ದುಗೊಳಿಸುವಂತೆ ನಿರ್ಧರಿಸಿತು.

ಮುಂದಿನ ಐದು ವರುಷಗಳಲ್ಲಿ ಸ್ಮಾರಕಗಳ ಛಾಯಾ ಚಿತ್ರಗಳನ್ನೂ ಮತ್ತು ವಾಸ್ತುಶಿಲ್ಪಗಳ ಮಾದರಿಗಳನ್ನು ತಯಾರಿಸುವುದಕ್ಕೆ ಗಮನ ಕೊಡಲಾಯಿತು. ಆದರೆ ವಾಸ್ತವವಾದ ಕೆಲಸವೇನೂ ನಡೆಯಲಿಲ್ಲ. ೧೮೭೦ರಲ್ಲಿ ಸೆಕ್ರೆಟರಿ ಆಫ್ ಸ್ಟೇಟ್‌ರಾದ ಲಾರ್ಡ್ ಅರ್ಗಿಲ್ಲರು ಇದಕ್ಕಿಂತ ಹೆಚ್ಚು ವಾಸ್ತವ ಕೆಲಸವನ್ನು ಕೈಗೊಳ್ಳಬೇಕೆಂದೂ, ಮತ್ತು ಇದು ಕೇಂದ್ರ ಇಲಾಖೆಯಿಂದ ಮಾತ್ರವೇ ಸಾಧ್ಯವೆಂದು ಅರಿತರು. ತತ್ಪರಿಣಾಮವಾಗಿ ಭಾರತ ಪುರಾತತ್ವ ವಿಭಾಗವು ಪುನರ್ಜನ್ಮ ತಾಳಿತು. ಕನ್ನಿಂಗ್‌ಹ್ಯಾಮರೇ ಅದರ ಡೈರೆಕ್ಟರ್ ಜನರಲ್ ಆಗಿ ನೇಮಿಸಲ್ಪಟ್ಟರು. ಈ ಸಾರಿ ಅವರಿಗೆ ಇಬ್ಬರು (ಸ್ವಲ್ಪ ದಿನಗಳಾದನಂತರ ಮೂವರು) ಸಹಾಯಕರನ್ನು ಕೊಡಲಾಯಿತು.

ಅಲ್ಲಿಂದ ಮುಂದೆ ಹದಿನಾಲ್ಕು ವರುಷಗಳವರೆಗೆ (೧೮೮೫ರವರೆಪಿಗೆ) ಕನ್ನಿಂಗ್‌ಹ್ಯಾಮ್ ಮತ್ತು ಅವರ ಸಹಾಯಕರು ಉತ್ತರ ಮತ್ತು ಪೂರ್ವ ಭಾರತವನ್ನೆಲ್ಲಾ ಸಂಚರಿಸಿ ಪ್ರಾಚೀನ ಸ್ಮಾರಕಳೇ ಮೊದಲಾದ ಅವಶೇಷಗಳನ್ನು ಕಂಡು ಹಿಡಿದಿದ್ದಲ್ಲದೇ ಹಿಂದೆ ನೋಡಿದ ಸ್ಮಾರಕಗಳಿಗೆ ಪುನಃ ಭೇಟಿ ಇತ್ತು, ನಾಣ್ಯ, ಶಾಸನ, ವಿಗ್ರಹ ಮುಂತಾದ ಪ್ರಾಚೀನ ವಸ್ತುಗಳನ್ನೂ ಬೆಳಕಿಗೆ ತಂದರು. ಅವರು ಸಾಧಿಸಿದ ಕಾರ್ಯಗಳನ್ನು ಅವರ ಮಾತಿನಲ್ಲೇ ಹೇಳುವದಾದರೆ:—"ಅನೇಕ ಮುಖ್ಯ ಪ್ರಾಚೀನ ನಗರಗಳನ್ನೂ, ಅಲೆಗ್ಸಾಂಡರನ ಇತಿಹಾಸಕ್ಕೆ ಸಂಬಂಧಪಟ್ಟ 'ಅನಾರ್ಸ್ ಡಾಕ" ತಕ್ಷಶಿಲೆ, ಸಂಗಲಕೋಟೆ ಅವಶೇಷಗಳನ್ನು ಹಾಗೂ ಬುದ್ಧನ ಚರಿತ್ರೆಗೆ ಸಂಬಂಧಿಸಿದ ಸಂಕಿಸ, ಶ್ರಾವಸ್ತಿ, ಕೌಶಾಂಬಿ ಮೊದಲಾದ ಪ್ರಸಿದ್ಧ ನಗರಗಳನ್ನು ಗುರುತಿಸಿರುವೆನು. ಅಶೋಕನ ಮೂರು ಕಾಲಸೂಚಕ ಶಾಸನಗಳನ್ನು ಕಂಡುಹಿಡಿದಿದ್ದೇನೆ. ನನ್ನ ಸಹಾಯಕರು ಅಶೋಕನ ಹೊಸ ಶಾಸನ ಸ್ಥಂಭವೊಂದನ್ನು, ಮತ್ತು ಬಂಡೆಯಮೇಲೆ ಬ್ಯಾಕ್ಟ್ರಿಯನ್ ಲಿಪಿಯಲ್ಲಿ ಕೆತ್ತಲ್ಪಟ್ಟು ಸಂಪೂರ್ಣವಾಗಿರುವ ಅಶೋಕನ ಹನ್ನೆರಡನೆ ರಾಜಶಾಸನವನ್ನು ಗುರುತಿಸಿದ್ದಾರೆ. ತಿಗೋವ, ಬಿಲ್ಸರ್, ಭೀತರ್‌ಗಾಂ, ಕುತೇರ ಮತ್ತು ದೇವಘಡ್‌ನಲ್ಲಿರುವ ಗುಪ್ತರ ದೇವಾಲಯಗಳಲ್ಲಿ ಅವರ ವಿಶೇಷ ವಾಸ್ತುಶಿಲ್ಪಶೈಲಿಯನ್ನು ಗುರುತಿಸಿರುವೆನು. ಇದಲ್ಲದೆ ಏರನ್, ಉದಯಗಿರಿ ಮೊದಲಾದ ಸ್ಥಳಗಳಲ್ಲಿ ಪ್ರಸಿದ್ಧ ರಾಜವಂಶದ ಹೊಸ ಶಾಸನಗಳನ್ನು ಕಂಡು ಹಿಡಿದಿರುವೆನು."

ಕನ್ನಿಂಗ್ ಹ್ಯಾಮರು ನಿರ್ವಹಿಸಿದ ಕಾರ್ಯವು ಅತ್ಯಂತ ಫಲಕಾರಿಯಾದ್ದರಿಂದ ಅವರ ಮೇಲ್ಕಂಡ ಹೇಳಿಕೆಯು ಅತಿಶಯೋಕ್ತಿಯಾಗಿ ಕಾಣುವುದಿಲ್ಲ.

ಮೇಲೆ ಸೂಚಿಸಿದಂತೆ ಕನ್ನಿಂಗ್‌ಹ್ಯಾಮರ ಪರಿಶೋಧನೆಗೆ ಉತ್ತರ ಮತ್ತು ಪೂರ್ವ ಭಾರತವು ಮಾತ್ರ ಒಳಪಟ್ಟಿತ್ತು. ಪಶ್ಚಿಮ ಭಾರತವನ್ನು ಪರಿಶೋಧಿಸಲು ೧೮೭೩ರಲ್ಲಿ ಜೇಮ್ಸ್ ಬರ್ಗೆಸ್‌ರವರ ನೇತೃತ್ವದಲ್ಲಿ "ಆರ್ಕಿಯಲಾಜಿಕಲ್ ಸರ್ವೆ ಆಫ್ ವೆಸ್ಟ್ ಇಂಡಿಯಾ" (ಪಶ್ಚಿಮ ಭಾರತ ಪುರಾತತ್ವ ವಿಭಾಗ) ವನ್ನು ಸ್ಥಾಪಿಸಲಾಯಿತು. ೧೮೮೧ರಲ್ಲಿ ಆರ್ಕಿಯಲಾಜಿಕಲ್ ಸರ್ವೆ ಆಫ್ ಸೌತ್ ಇಂಡಿಯಾ (ದಕ್ಷಿಣ ಭಾರತ ಪುರಾತತ್ವ ವಿಭಾಗ)ವನ್ನು ಕೂಡ ಇವರ ಅಧಿಕಾರಕ್ಕೆ ಸೇರಿಸಲಾಯಿತು.

ಪ್ರಾಚೀನ ಸ್ಮಾರಕಗಳನ್ನು ಸಂರಕ್ಷಿಸುವಂತೆ ೧೮೭೩ರಲ್ಲಿ ಸುಪ್ರೀಂ ಸರ್ಕಾರವು ಸ್ಥಳೀಯ ಸರಕಾರಗಳಿಗೆ ಸಲಹೆ ಕೊಟ್ಟಿತು. ೧೮೭೮ರಲ್ಲಿ ಇವುಗಳನ್ನು ಸಂರಕ್ಷಿಸುವುದು ಕೇಂದ್ರ ಸರ್ಕಾರದ ಕರ್ತವ್ಯವೆಂದು ಗವರ್ನರ್ ಜನರಲ್‌ರಾದ ಲಾರ್ಡ್ ಲಿಟ್ಟನ್‌ರು ಅಭಿಪ್ರಾಯಪಟ್ಟರು. "ಸುಪ್ರೀಂ ಸರ್ಕಾರದ ಹಣಕಾಸಿನ ಮತ್ತು ಮೇಲ್ವಿಚಾರಣೆಯ ಸಹಾಯದಿಂದ ನಡೆಸಬೇಕಾಗಿರುವ ಸಾರ್ವಭೌಮತ್ವದ ಕಾರ್ಯಗಳಲ್ಲಿ ಪ್ರಾಚೀನ ಸ್ಮಾರಕಗಳ ಪುನರುದ್ಧಾರ ಮುಖ್ಯವಾದದ್ದು" ಎಂದು ಅವರು ವ್ಯಕ್ತಪಡಿಸಿದರು. ಇದರ ಪರಿಣಾಮವಾಗಿ ೧೮೮೦ರಲ್ಲಿ ಹೆಚ್. ಹೆಚ್. ಕೋಲರು ಪ್ರಾಚೀನ ಸ್ಮಾರಕಗಳ ಆಡಳಿತಗಾರರಾಗಿ ನೇಮಿಸಲ್ಪಟ್ಟರು. ಮುಂದಿನ ಎರಡು ವರುಷಗಳವರೆಗೆ ಅವರ ಕೆಲಸ ಸಮರ್ಪಕವಾಗಿದ್ದರೂ ಆ ಹುದ್ದೆಯನ್ನೇ ರದ್ದುಗೊಳಿಸಿದ್ದರಿಂದ ಸ್ಮಾರಕಗಳ ಸಂರಕ್ಷಣೆಯು ಪುನಃ ಸ್ಥಳೀಯ ಸರ್ಕಾರಗಳ ಜವಾಬ್ದಾರಿಯಾಯಿತು.

ಶಾಸನಗಳನ್ನು ಸಂಗ್ರಹಿಸುವುದರಲ್ಲೂ ಮತ್ತು ಲಿಪಿಯನ್ನು ಓದುವುದರಲ್ಲೂ ಕನ್ನಿಂಗ್‌ಹ್ಯಾಮರೇ ಶ್ರದ್ಧೆವಹಿಸಿದರೂ, ಸಂಗ್ರಹಿಸಿದಷ್ಟು ಶಾಸನಗಳನ್ನು ವಂಶಾನುಸಾರವಾಗಿ ಉಕ್ತ ರೀತಿಯಲ್ಲಿ ಪ್ರಕಟಿಸಬೇಕೆಂದು ಅವರ ಅಭಿಪ್ರಾಯವಾಗಿತ್ತು. ಆದ್ದರಿಂದ ೧೮೮೩ರಲ್ಲಿ ಜಾರ್ಜ್ ಫೇತ್‌ಫುಲ್ ಫ್ಲೀಟರು ಸರ್ಕಾರದ ಲಿಪಿಶಾಸ್ತ್ರಜ್ಞ (ಗವರ್ನಮೆಂಟ್ ಎಪಿಗ್ರಾಫಿಸ್ಟ್) ರಾಗಿ ಮೂರು ವರ್ಷಗಳ ಅವಧಿಗೆ ನೇಮಿಸಲ್ಪಟ್ಟರು. ೧೮೮೬ರಲ್ಲಿ ಇ. ಹುಲ್ಟ್ಸರನ್ನು ದಕ್ಷಿಣ ಭಾರತದ ಲಿಪಿಶಾಸ್ತ್ರಜ್ಞರನ್ನಾಗಿ ನೇಮಿಸಲಾಯ್ತು.

ಕನ್ನಿಂಗ್‌ಹ್ಯಾಮ್‌ರು ೧೮೮೫ರಲ್ಲಿ ನಿವೃತ್ತರಾದ ಮಾರನೇ ವರ್ಷ ಜೇಮ್ಸ್ ಬರ್ಗೆಸ್‌ರು ಡೈರೆಕ್ಟರ್ ಜನರಲ್‌ರಾಗಿ ನೇಮಿಸಲ್ಪಟ್ಟರು. ಮೂವರು ಸ್ಥಳೀಯ ಸರ್ವೇಯರ್‌ಗಳ ಹತೋಟಿಯಲ್ಲಿ ಉತ್ತರ ಮತ್ತು ಪೂರ್ವಭಾಗಗಳೂ, ನೇರವಾಗಿ ಬರ್ಗೆಸ್‌ರ ಅಧೀನದಲ್ಲಿ ಪಶ್ಚಿಮ ಮತ್ತು ದಕ್ಷಿಣ ಭಾಗಗಳೂ ಇದ್ದಿದ್ದರಿಂದ ಡೈರೆಕ್ಟರ್ ಜನರಲ್‌ರ ಅಧಿಕಾರವನು ವಿಶೇಷವಾಗಿ ವಿಕೇಂದ್ರೀಕರಿಸಲಾಯಿತು. ಈ ಏರ್ಪಾಡು ತೊಡಕಾಗಿದ್ದರಿಂದ ಪ್ರಯೋಜನಕಾರಿಯಾಗಲಿಲ್ಲ.

ಮೂರು ವರ್ಷಗಳನಂತರ ಬರ್ಗೆಸ್ಸರು ಕೆಲಸದಿಂದ ನಿವೃತ್ತಿಯಾದರು. ಅನಂತರ ಕೇಂದ್ರ ಸಂಸ್ಥೆಯಾಗಿದ್ದ ಪುರಾತತ್ವ ವಿಭಾಗವನ್ನು ರದ್ದು ಮಾಡಲಾಯಿತು. ಪುರಾತತ್ವದ ಕೆಲಸವೆಲ್ಲಾ ಸ್ಥಳೀಯ ಸರ್ಕಾರಗಳ ಮೇಲೆ ಬಿತ್ತು. ಇದರ ಪರಿಣಾಮವಾಗಿ ಕಾರ್ಯದಲ್ಲಿ ಪ್ರಗತಿಯೇ ಇಲ್ಲವಾಯಿತು. ೧೮೯೮ರವರೆಗೂ ಈ ಶೋಚನೀಯ ಪರಿಸ್ಥಿತಿ ದುರ್ದರಿಂದ ಸರ್ಕಾರವು ಎಚ್ಚೆತ್ತು ಪುನಃ ತನ್ನ ಜವಾಬ್ದಾರಿಯನ್ನರಿತುಕೊಂಡು ಪ್ರಾಚೀನ ಸ್ಮಾರಕಗಳನ್ನು ಸಂರಕ್ಷಿಸಲು ದೇಶವನ್ನು ಐದು ಸರ್ಕಲ್‌ಗಳಾಗಿ ವಿಭಜಿಸುವ ತೆಯೂ, ಪ್ರತಿಯೊಂದು ಸರ್ಕಲಿನ ಸರ್ವೆಯರ್ ತನ್ನ ಹದ್ದಿನಲ್ಲಿರುವ ಪ್ರಧಾನ ಸ್ಥಳೀಯ ಸರ್ಕಾರದ ಅಧೀನದಲ್ಲಿ ಕೆಲಸವನ್ನು ನಿರ್ವಹಿಸುವಂತೆಯೂ ಮತ್ತು ಹುಲ್ಟ್ಸರು ದಕ್ಷಿಣಭಾರತದಲ್ಲಿ ಲಿಪಿಶಾಸ್ತ್ರಜ್ಞರಾಗಿರತಕ್ಕದ್ದೆಂದೂ, ಪ್ರಸ್ತಾಪಿಸಿದ ಯೋಜನೆಯು ಐದು ವರುಷಗಳ ಅವಧಿಗೆ ಒಪ್ಪಲಾಯಿತು.

# ೪

ಕೇಂದ್ರದ ಉಸ್ತುವಾರಿಯಲ್ಲಿರದ ಭಾರತ ಪುರಾತತ್ವವು ಅವ್ಯವಸ್ಥೆಯಲ್ಲಿರುವುದನ್ನು ಲಾರ್ಡ್ ಕರ್ಜನ್ನರು ತಾವು ೧೮೯೯ರಲ್ಲಿ ಗವರ್ನರ್ ಜನರಲ್ ಆಗಿ ಭಾರತಕ್ಕೆ ಬಂದ ಕೂಡಲೇ ತಿಳಿದುಕೊಂಡರು. ಯಾವ ಸ್ಥಳೀಯ ಸರ್ಕಾರವೂ ಪುರಾತತ್ವದಲ್ಲಿ ಶ್ರದ್ಧೆವಹಿಸಿರಲಿಲ್ಲವೆಂದು ಅವರಿಗೆ ಕಂಡುಬಂದಿತು. ಅವರ ಅಭಿಪ್ರಾಯದಲ್ಲಿ ಸುಂದರವಾದ ಮತ್ತು ಪ್ರಸಿದ್ಧ ಕಟ್ಟಡಗಳು ಮಣ್ಣು ಪಾಲಾಗುವುದರ ಮೊದಲು ಅವುಗಳನ್ನು ಜೀರ್ಣೋದ್ಧಾರ ಅಥವಾ ದುರಸ್ತು ಮಾಡುವುದಕ್ಕಾಗಿ ಯಾವ ನಿಯಮವಾಗಲೀ ಅಥವಾ ಏಕೀ ಭಾವವಾಗಲೀ ಇದ್ದಂತಿರಲಿಲ್ಲ. ಮುಂದುವರಿಯುತ್ತ ಅವರು ನಿರೂಪಿಸಿದ್ದೆಂದರೆ "ಭಾರತದಲ್ಲಿ ಜರ್ಮನರ ಆಡಳಿತವೇ ಇದ್ದಿದ್ದರೆ ನಾವು ನಟನಾ ಔದಾರ್ಯವಾಗಿ ಪುರಾತತ್ವಕಾರ್ಯಕ್ಕೆ ಸಾಲಿಯಾನ ಕೊಡುತ್ತಿರುವ ೬೧,೦೦೦ ರೂಪಾಯಿಗಳ (ಈಗ ೮೮,೦೦೦ರೂಪಾಯಿಗಳಿಗೆ ಹೆಚ್ಚಿಸಿರುವ) ಬದಲು ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡುತ್ತಿದ್ದರೆಂಬುವುದರಲ್ಲಿ ಸಂದೇಹವೇ ಇಲ್ಲ."

೧೯೦೬ರಲ್ಲಿ ಫೆಬ್ರವರಿ ೬ನೇ ತಾರೀಖು ಬಂಗಾಳ ರಾಯಲ್ ಏಷ್ಯಾಟಿಕ್ ಸೊಸೈಟಿಯಲ್ಲಿ ಮಾಡಿದ ಪ್ರಸಿದ್ಧ ಭಾಷಣದಲ್ಲಿ ಕರ್ಜನ್‌ರು ಹೇಳಿದ್ದೇನೆಂದರೆ "ಲಿಪಿಶಾಸ್ತ್ರವು ಸಂಶೋಧನೆಗಿಂತ ಹಿಂದುಳಿಯಕೂಡದು; ಹಾಗೆಯೇ ಸಂಶೋಧನೆಯೂ ಜೀರ್ಣೋದ್ಧಾರ ಕಾರ್ಯಕ್ಕಿಂತ ಹೆಚ್ಚು ಅಮುಖ್ಯವೆಂದು ತಿಳಿಯ ಕೂಡದು. ನನ್ನ ಅಭಿಪ್ರಾಯದಲ್ಲಿ ಭೂ ಸಂಶೋಧನೆ, ಪ್ರಕಾಶನ, ಪ್ರಾಚೀನವಸ್ತುಗಳ ವರ್ಗೀಕರಣ ಮತ್ತು ವಿವರಣೆ; ಶಾಸನಗಳನ್ನು ನಕಲು ಮಾಡಿ ಓದುವುದು, ಸ್ಮಾರಕಗಳ ಸಂರಕ್ಷಣೆ ಮತ್ತು ಜೀರ್ಣೋದ್ಧಾರ ನಮ್ಮ ಮುಖ್ಯಕರ್ತವ್ಯ." ಅವರ ಭಾವನೆಯಲ್ಲಿ ಪುರಾತತ್ವವು ಬಹು ಸಂಗ್ರಹದಾಯಕವಾಗಿದ್ದು. ಪ್ರಾಚ್ಯವಸ್ತುಗಳ ಅನ್ವೇಷಣೆ, ಭೂಸಂಶೋಧನೆ, ವಿಚಾರಪರಿಶೋಧನೆ, ಪ್ರಾಚೀನ ಲಿಪಿ ಶಾಸ್ತ್ರ, ಸಂಶೋಧನಾ ಪ್ರಕಟಣೆ ಮತ್ತು ಸ್ಮಾರಕಗಳ ಸಂರಕ್ಷಣೆ ಮೊದಲಾದುವುಗಳೊನ್ನೊಳಗೊಂಡಿತ್ತು.

೧೯೦೦ರಲ್ಲಿ ಪುರಾತತ್ವ ವಿಭಾಗದ ಸರ್ವೇಯರ್‌ಗಳ ಮೇಲ್ವಿಚಾರಣೆಗಾಗಿ ಮತ್ತು ಅವರ ಕೆಲ್ಸವನ್ನು ಸಂಗ್ರಹಿಸುವುದಕ್ಕಾಗಿ, ಡೈರೆಕ್ಟರ್ ಜನರಲ್‌ರ ಹುದ್ದೆಯನ್ನು ಪುನಃ ಸ್ಥಾಪಿಸುವಂತೆಯೂ, ಮತ್ತು ಪುರಾತತ್ವಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಕೈಗೊಳ್ಳುವುದಕ್ಕಾಗಿ ಸ್ಥಳೀಯ ಸರ್ಕಾರಗಳಿಗೆ ವರ್ಷವೊಂದಕ್ಕೆ ಒಂದು ಲಕ್ಷರೂಪಾಯಿಯನ್ನಾದರೂ ಸಹಾಯಕ ಹಣವಾಗಿ ಕೊಡತಕ್ಕದ್ದೆಂದು ಕರ್ಜನ್ನರು ಬ್ರಿಟಿಷ್ ಸರಕಾರವನ್ನು ಬಿನ್ನವಿಸಿದರು. ಕರ್ಜನ್ನರ ಸಂಪೂರ್ಣ ಕೇಂದ್ರಿಕರಣಧ್ಯೇಯಕ್ಕೂ ಮತ್ತು ಪುರಾತತ್ವದ ಆಗಿನ ಶೋಚನೀಯ ಪರಿಸ್ಥಿತಿಗೂ ಮಧ್ಯಸ್ಥವಾಗಿ ಮುಂದೆ ತಿಳಿಸುವಂತೆ ಕರ್ಜನ್ನರ ಕೇಂದ್ರೀಕರಣಧ್ಯೇಯವು ಇಪ್ಪತ್ತು ವರುಷಗಳ ನಂತರ ಸಂಪೂರ್ಣವಾಯಿತು.

ಬ್ರಿಟಿಷ್ ಸರ್ಕಾರವು ಈ ಸಲಹೆಗಳನ್ನು ಒಪ್ಪಿಕೊಂಡ ಪರಿಣಾಮವಾಗಿ ಇಪ್ಪತ್ತಾರು ವರುಷದ ಯುವಕರಾದ ಜಾನ್ ಮಾರ್ಷಲ್‌ರು ಪುನರ್ವ್ಯವಸ್ಥಿತವಾದ ಭಾರತ ಪುರಾತತ್ವ ವಿಭಾಗದ ಪ್ರಪ್ರಥಮ ಡೈರೆಕ್ಟರ್ ಜನರಲ್‌ರಾಗಿ ೧೯೦೨ರಲ್ಲಿ ಭಾರತಕ್ಕೆ ಆಗಮಿಸಿದರು.

# 1902ರ ನಂತರ

## ೧

ಜಾರ್ಜ್ ಮಾರ್ಷಲ್‌ರು ಭಾರತ ಪುರಾತತ್ವ ವಿಭಾಗದ ಚಟುವಟಿಕೆಗಳನ್ನು ಅತ್ಯ ಕಾಲದಲ್ಲಿ ತಹಬಂದಿಗೆ ತರುವುದರಲ್ಲಿ ಜಯಶೀಲರಾದರು. ದೆಹಲಿ, ಆಗ್ರ ಮೊದಲಾ ಸ್ಥಳಗಳಲ್ಲಿರುವ ಪ್ರಸಿದ್ಧ ಸ್ಮಾರಕಗಳನ್ನು ಜೀರ್ಣೋದ್ಧಾರ ಮಾಡಿದರು. ಕೆಲವು ಮು ಸ್ಥಳಗಳಲ್ಲಿ ಭೂಶೋಧನೆಯನ್ನು ಕೈಗೊಂಡರು. ಸಂಗ್ರಹಾಲಯಗಳಿಗೆ ಉತ್ತೇಜನ ವಿತ್ತರ 'ಪ್ರಾಚೀನ ಸ್ಮಾರಕಗಳನ್ನು ಸಂರಕ್ಷಿಸುವುದಕ್ಕಾಗಿಯೂ, ಕೆಲವು ಸ್ಥಳಗಳಲ್ಲಿ ಭೂಶೋಧನೆಯನ ಹತೋಟಿಗೆ ತರುವುದಕ್ಕಾಗಿಯೂ ಮತ್ತು ಕೆಲವು ಸಂದರ್ಭಗಳಲ್ಲಿ ಪ್ರಾಚೀನ ಸ್ಮಾರಕಗಳನ್ನೂ ಪ್ರಾಚ್ಯಸಂಶೋಧನೆ, ಇತಿಹಾಸ ಅಥವಾ ಕಲಾದೃಷ್ಟಿಯಿಂದ ಮುಖ್ಯವಾದ 'ವಸ್ತುಗಳನ ಸಂರಕ್ಷಿಸುವುದಲ್ಲದೆ, ವಶಪಡಿಸಿಕೊಳ್ಳುವುದಕ್ಕಾಗಿ, ೧೯೦೪ರಲ್ಲಿ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾನೂನನ್ನು (ಏನ್ಷಂಟ್ ಮಾನ್ಯುಮೆಂಟ್ಸ್ ಪ್ರಿಸರ್ವೇಷನ್ ಆಕ್ಟ್) ಜಾರಿಗೆ ತಂದರು.

ಐದು ವರುಷಗಳ ಅವಧಿಗಾಗಿ ಸರ್ಕಾರವು ೧೮೯೯ರಲ್ಲಿ ಐದು ಸರ್ಕಲ್‌ಗಳನ ಅಂಗೀಕರಿಸಿತ್ತೆಂದು ಹಿಂದೆ ತಿಳಿಸಲಾಗಿದೆ. ಮಾರ್ಷಲ್‌ರು ಈ ವಿಭಾಗವನ ಚಿರಕಾಲ ಇಡಬೇಕೆಂದು ಒತ್ತಾಯಪಡಿಸಿದರು. "ಪುರಾತತ್ವ ಇಲಾಖೆಯು ಅಧಿಕಾರಿಗ ಕಾರ್ಯವನ್ನು ನಿರ್ವಹಿಸಲು ಈಗಿರುವ ಬೇರೆ ಯಾವ ಇಲಾಖೆಯಿಂದಲೂ ಸಾಧ್ಯವಿ ಮತ್ತು ಪ್ರಾಚೀನಾವಶೇಷಗಳನ್ನು ಸಂರಕ್ಷಿಸುವುದು ತನ್ನ ಜವಾಬ್ದಾರಿಯೆಂದು ಸರ್ಕಾರ ಒಪ್ಪದಿದ್ದರೆ ಮಾತ್ರ ಈ ಕಾರ್ಯವನ್ನು ನಿಲ್ಲಿಸಬಹುದು, ಇಲ್ಲದಿದ್ದರೆ ಸಾಧ್ಯವಿಲ್ಲ" ಎಂ ಖಚಿತವಾಗಿ ತಿಳಿಸಿದರು.

೧೯೦೬ರಲ್ಲಿ ಪುರಾತತ್ವ ವಿಭಾಗವನ್ನು ಸ್ಥಿರವಾಗಿ ನಿಲ್ಲಿಸಲಾಯಿತು. ಮೈಸೂ ಸಂಸ್ಥಾನವು ತನ್ನದೇ ಒಂದು ಪುರಾತತ್ವ ಇಲಾಖೆಯನ್ನು ಹೊಂದಿದ್ದರಿಂದ ಆ ಸಂಸ್ಥಾನವನ ಬಿಟ್ಟು, ಆದರೆ ಬರ್ಮಾದೇಶವನ್ನೊಳಗೊಂಡ ಭಾರತವು ಆರು ಸರ್ಕಲ್‌ಗಳಾಗಿ ವಿಂಗಡಿಸ ಟ್ಟಿತು. ಪುರಾತತ್ವ ವಿಭಾಗಕ್ಕೆ ಒಬ್ಬ ಡೈರೆಕ್ಟರ್ ಜನರಲ್ ಮತ್ತು ಒಬ್ಬ ಸರ್ಕಾರಿ ಲಿ ಶಾಸ್ತ್ರಜ್ಞರು ನೇಮಿಸಲ್ಪಟ್ಟರು.

ಭದ್ರವಾಗಿ ಸ್ಥಾಪಿಸಲ್ಪಟ್ಟಿದ್ದರಿಂದಲೂ ಮತ್ತು ಖಚಿತವಾದ ಧ್ಯೇಯಗಳನ್ನೊಳಗೊಂಡಿ ರಿಂದಲೂ, ಹೆಚ್ಚು ಆಸಕ್ತಿ ಮತ್ತು ಧೈರ್ಯದಿಂದ ಪುರಾತತ್ವ ವಿಭಾಗವು ಕರ್ತವ್ಯಗಳನ ಪರಿಪಾಲಿಸಲು ಸಾಧ್ಯವಾಯಿತು. ನೂರಾರು ಸ್ಮಾರಕಗಳು ಮತ್ತು ಪ್ರಾಚೀನ ಸ್ಥಳಗ ಸಂರಕ್ಷಿಸಲ್ಪಟ್ಟವುಗಳೆಂದು ಘೋಷಿಸಲಾಗಿ ಅವು ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾನೂ ಒಳಪಟ್ಟಂತಾದವು.

೧೯೧೧ರಲ್ಲಿ ನಡೆದ ಪೌರ್ವಾತ್ಯ ಶಾಸ್ತ್ರಜ್ಞರ ಸಮ್ಮೇಳನದಲ್ಲಿ ಪುರಾತತ್ವ ವಿಭಾಗ ಸಂಪೂರ್ಣವಾಗಿ ಬ್ರಿಟೀಷರ ಕೈಯಲ್ಲಿದೆ ಎಂಬ ಕಠಿಣವಾದ ಟೀಕೆ ಪರಿಣಾಮವಾಗಿ ಮಾರನೆ ವರ್ಷ ಸಮರ್ಥರಾದ ಭಾರತೀಯರನ್ನು ಈ ವಿಭಾಗಕ್ಕೆ ನೇಮಿಸತಕ್ಕದ್ದೆಂದು ಸರ್ಕಾರ ಮಂಡಿಸಿತು. ಈ ಸಂದರ್ಭದಲ್ಲಿ ತಿಳಿಸಬೇಕಾದ ಇನ್ನೊಂದು ವಿಷಯವೇನೆಂದರೆ, ಈ ವಿಭಾಗದ ಸೇವೆಯಲ್ಲಿ ಶೇಕಡ ೪೦ರಷ್ಟು ಮಾತ್ರ ಐರೋಪ್ಯರು ಇರತಕ್ಕದ್ದೆಂದೂ, ಮಿಕ್ಕವರೆಲ್ಲಾ

ೀ ಆಗಿರಬೇಕೆಂದೂ, ಸರ್ಕಾರವು ೧೯೨೧ರಲ್ಲಿ ತೀರ್ಮಾನಿಸಿತು. ಈ ನಿಯಮವು ಷ್ಟೋ ವರುಷಗಳಿಂದ ಜಾರಿಯಲ್ಲಿರದೆ ತಟಸ್ಥವಾಗಿತ್ತೆಂದು ಹೇಳಬೇಕಾಗಿಲ್ಲ. ಈಗ ರ್ಣವಾಗಿ ಭಾರತೀಯರಿಂದಲೇ ಪುರಾತತ್ವ ವಿಭಾಗವು ನಡೆಸಲ್ಪಡುತ್ತಿದೆ.

೧೯೧೯ನೇ ಗವರ್ನಮೆಂಟ್ ಆಫ್ ಇಂಡಿಯಾ ಆಕ್ಟ್ ಪ್ರಕಾರ ಪುರಾತತ್ವವು ೧೯೨೧ರಲ್ಲಿ ಂದ್ರ ವಿಷಯವಾಗಿ ಮಾಡಲ್ಪಟ್ಟಿದ್ದರಿಂದ ಪುರಾತತ್ವ ವಿಭಾಗವು ಸಂಪೂರ್ಣವಾಗಿ ಕೇಂದ್ರ ಸ್ಥೆಯಾಯಿತು. ಸ್ಥಳೀಯ ಸರ್ಕಾರಗಳಿಗೆ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾನೂನು ಾರ ಸ್ಮಾರಕಗಳನ್ನು ಮತ್ತು ಸ್ಥಳಗಳನ್ನು ಸಂರಕ್ಷಿತವುಗಳಾಗಿ ಘೋಷಿಸುವ ಅಧಿಕಾರ ತ್ರ ಉಳಿಯಿತು.

೧೯೩೫ನೇ ಇಸ್ವಿ ಗವರ್ನಮೆಂಟ್ ಆಫ್ ಇಂಡಿಯಾ ಆಕ್ಟ್ ಪ್ರಕಾರ ಈ ಅಧಿಕಾರವು ಡ ಕೇಂದ್ರ ಸರ್ಕಾರಕ್ಕೆ ವರ್ಗಾಯಿಸಲ್ಪಟ್ಟಿತು.

೧೯೨೦ರ ವರೆಗೆ ಪುರಾತತ್ವ ವಿಭಾಗವು ನಡೆಯಿಸಿದ ಭೂಶೋಧನೆಯನ್ನು ಸಂಕ್ಷಿಪ್ತ ಗಿ ಈ ಕೆಳಗೆ ತಿಳಿಸಲಾಗಿದೆ. ಕನ್ನಿಂಗ್‌ಹ್ಯಾಮರ ಕಾಲದಲ್ಲಿ ಬೌದ್ಧಮತದ ಸ್ಥಳಗಳಿಗೆ ್ರಮುಖ್ಯತೆ ದೊರೆತಿದ್ದುದರಿಂದ ಸಾರ್‌ನಾಥ್, ರಾಜಗೃಹ, ಸಾಂಚಿ, ಸ್ರಾವಸ್ತಿ, ಕುಶಿನಗರ, ಂದ ಮತ್ತು ವಾಯುವ್ಯ ಸರಹದ್ದಿನ ಪ್ರಾಂತಗಳಲ್ಲಿರುವ ಅವಶೇಷಗಳಿಗೆ ಹೆಚ್ಚು ಗಮನ ಡಲಾಯಿತು. ಬೌದ್ಧಮತಕ್ಕೆ ಸಂಬಂಧಪಟ್ಟ ವಾಸ್ತುಶಿಲ್ಪಕಲೆ ಮತ್ತು ಶಿಲ್ಪಶಾಸ್ತ್ರಗಳ ್ಯಾಭ್ಯಾಸವು ವಿಶೇಷವಾಗಿ ಮುಂದೊರಿಯಿತು. ಪ್ರಾಚೀನ ನಗರಗಳ ಪೈಕಿ, ಅಲಹಬಾದ್ ೀಪದಲ್ಲಿರುವ ಭೀಟಾ, ರಾವಲ್ಪಿಂಡಿ ಜಿಲ್ಲೆಯಲ್ಲಿರುವ ತಕ್ಷಶಿಲೆ ಮತ್ತು ಪಾಟ್ನ ಅಗೆಯಲ್ಪಟ್ಟವು. ವುಗಳಲ್ಲಿ ಮೊದಲನೇ ಸ್ಥಳವು ಕ್ರಿಸ್ತಪೂರ್ವದಲ್ಲಿ ವ್ಯಾಪಾರ ಕೇಂದ್ರವಾಗಿತ್ತೆಂದು ಕಂಡು ದಿತು. ಪಾಟ್ನದ ಸಮೀಪದಲ್ಲಿ ಭೂಶೋಧನೆ ಕೈಗೊಂಡ ಫಲಿತಾಂಶವಾಗಿ ಪಾಟಲೀಪುತ್ರ ್ಲಿ ಮೌರ್ಯರ ಅರಮನೆಯ ಅವಶೇಷಗಳು ಗೋಚರವಾದವು. ಮರದಿಂದ ಕಟ್ಟಲ್ಪಟ್ಟ ಅರಮನೆಯು ಲಂಕ್ಕಿಂತ ಹೆಚ್ಚಾದ ಶಿಲಾಸ್ಥಂಭಗಳ ಮೇಲೆ ನಿಂತಿತ್ತೆಂದು ನಂಬಲಾಗಿದೆ. ಶಿಲೆಯಲ್ಲಿ ೧೯೧೩ ರಿಂದ ೧೯೩೪ರ ವರೆವಿಗೆ ಜರುಗಿದ ಭೂಶೋಧನೆಯ ಫಲಿತಾಂಶವಾಗಿ ದರವೇಲೊಂದು ನಿರ್ಮಿಸಿದ ಮೂರು ನಗರಗಳ ಅವಶೇಷಗಳು ಕಂಡುಬಂದವು. ಕ್ರಿಸ್ತ ರ್ವ ಐದನೆ ಶತಮಾನದಿಂದ ಪ್ರಾರಂಭಿಸಿ "ಭೀರ್" ದಿಣ್ಣೆಯಲ್ಲಿ ಮೊಟ್ಟಮೊದಲಿನ ನಗರವು ೆಗ್ಸಾಂಡರನ ದಂಡೆಯಾತ್ರೆವರೆವಿಗೆ ಉನ್ನತ ಸ್ಥಿತಿಯಲ್ಲಿತ್ತು. ಎರಡನೇ ನಗರವಾದ ರ್ಕಪ್' ಇಂಡೋ-ಗ್ರೀಕರ ಕಾಲದಲ್ಲಿ ಸ್ಥಾಪಿಸಲ್ಪಟ್ಟು, ಇಂಡೋ-ಪಾರ್ಥಿಯನ್ನರ ಕಾಲ ್ಲಿ ಸುವ್ಯವಸ್ಥಿತವಾದ ನಗರ ರಚನೆಯನ್ನು ಹೊಂದಿತ್ತು. ಮೂರನೇ ನಗರವಾದ 'ಸಿರ್‌ಸುಖ' ಷಾನರ ಕಾಲದಲ್ಲಿ ಸ್ಥಾಪಿಸಲಾಯಿತು.

೨

೧೯೨೦ರ ವರೆಗೆ ಮೇಲೆ ತಿಳಿಸಿದ ಭೂಶೋಧನೆಗಳನ್ನು ಪುರಾತತ್ವ ವಿಭಾಗವು ನಡೆ ತ್ತಿರುವಾಗ ಮಹತ್ವದ ಘಟನೆಯೊಂದು ನಡೆಯಿತು. ಅದೇನೆಂದರೆ ಪಂಜಾಬಿನ ಮಾಂಟ್ಗೊ ರಿ ಜಿಲ್ಲೆಯಲ್ಲಿರುವ ಹರಪ್ಪ ಎಂಬಲ್ಲಿಯೂ, ಸಿಂಧ್ ಪ್ರಾಂತದ ಲಾರ್ಕಾನ ಜಿಲ್ಲೆಯಲ್ಲಿರುವ ಾಹೆಂಜೊದರೊ ಎಂಬಲ್ಲಿಯೂ "ಸಿಂಧು ನದಿಯ ನಾಗರೀಕತೆ" ಬೆಳಕಿಗೆ ಬಂತು. ಇವೆರಡು ಳಗಳೂ ಈಗ ಪಾಕಿಸ್ಥಾನದಲ್ಲಿವೆ. ಹರಪ್ಪದಲ್ಲಿ ೧೯೨೧ ರಲ್ಲಿಯೂ ಮತ್ತು ಮೊಹೆಂಜೊದರೊ ಲ್ಲಿ ೧೯೨೨ರಲ್ಲೂ ಭೂಶೋಧನೆಯನ್ನು ಪ್ರಾರಂಭಿಸಲಾಯಿತು. ಇನ್ನು ಮುಂದೆ "ಹರಪ್ಪ

ಸಂಸ್ಕೃತಿ'' ಎಂದು ಕರೆಯಲಾಗುವ ಈ ಸಂಸ್ಕೃತಿಯ ಅವಶೇಷಗಳು ಭಾರತದಲ್ಲಿ ಅದುವರೆಗೆ ತಿಳಿದ ಯಾವ ಪ್ರಾಚೀನ ಅವಶೇಷಗಳ ಗುಂಪಿಗೂ ಸೇರಿರಲಿಲ್ಲವೆಂದು ಪ್ರಾರಂಭದಲ್ಲಿಯೇ ತಿ ಯಿತು. ಬಳಪದ ಕಲ್ಲಿನ ಮುದ್ರೆಗಳಮೇಲೆ ಕೆತ್ತಲ್ಪಟ್ಟ ವಿಚಿತ್ರ ಲಿಪಿಯ ವಿಷಯವಾ ಸಂಕ್ಷಿಪ್ತ ವರದಿಯನ್ನು ೧೯೨೪ರಲ್ಲಿ ಲಂಡನ್ನಿನಲ್ಲಿ ಪ್ರಕಟಿಸಿದ ತರುವಾಯ ಈ ತರಹ ಮುದ್ರೆಗಳು ಇರಾಕ್ ದೇಶದಲ್ಲಿ ಕ್ರಿ. ಪೂ. ೩ನೇ ಸಹಸ್ರಾಬ್ದಿಗೆ ಸೇರಿದ ಕೆಲವು ಪ್ರಾಚೀನ ಸ್ಥ ಗಳಲ್ಲಿ ಸಿಕ್ಕಿದ ವಿಷಯವನ್ನು ವಿದೇಶಿ ಪ್ರಾಜ್ಞರು ತಿಳಿಸಿದರು.

ಈ ಅದ್ಭುತ ಸಂಶೋಧನೆಯ ಫಲಿತಾಂಶವಾಗಿ ಭಾರತೀಯ ಪುರಾತತ್ವವು ಏಕಾಏ ಯಾಗಿ ಮೂರು ಸಾವಿರ ವರುಷಗಳ ಹಿಂದಕ್ಕೆ ಒಯ್ಯಲ್ಪಟ್ಟಿತು. ಆದುವರೆವಿಗೂ ಭಾರತದ ಬೌದ್ಧ ಕಾಲಕ್ಕಿಂತ ಪ್ರಾಚೀನವಾದ ಅವಶೇಷಗಳೇನೂ ಇರಲಿಲ್ಲವಾದ್ದರಿಂದ, ಈ ನವ ಸಂಶೋ ಧನೆಯು ಭಾರತದ ಪ್ರಾಚ್ಯವಸ್ತು ವಿಷಯದಲ್ಲಿ ಉತ್ಸಾಹವನ್ನು ಉದ್ರೇಕಿಸಿತು. ದಿನೇ ದಿನೇ ಹೆಚ್ಚುತ್ತಿರುವ ಸಂಶೋಧನಾ ಕಾರ್ಯವನ್ನು ನಡೆಸಲು ೧೯೨೬ರಲ್ಲಿ ಅನ್ವೇಷಣಾ ಶಾಖೆ ಯನ್ನು ಸ್ಥಾಪಿಸಲಾಯಿತು. ಮುಖ್ಯವಾದ ಈ ಸಂಶೋಧನಾ ಕಾರ್ಯವನ್ನು ಮುಂದುವರಿಸಲೇ ಬೇಕಾಗಿತ್ತು. ಹರಪ್ಪ ಮತ್ತು ಮೊಹಂಜೊದಾರೊ ಎರಡು ಸ್ಥಳಗಳಲ್ಲಿಯೂ ಹೆಚ್ಚು ಪ್ರಮಾಣದಲ್ಲಿ ಭೂಶೋಧನೆ ನಡೆಸಿದ ಪರಿಣಾಮವಾಗಿ ಎರಡು ವಿಶಾಲವಾದ ನಗರಗಳು ಗೋಚರವಾದವು. ಸಿಂಧ್ ಮತ್ತು ಬಲೂಚಿಸ್ಥಾನದಲ್ಲಿ ಪ್ರಾಚೀನಾವಶೇಷಗಳ ಅನ್ವೇಷಣೆ ಯನ್ನು ವಿಸ್ತಾರವಾಗಿ ಕೈಗೊಳ್ಳುವುದು ಅತ್ಯಾವಶ್ಯಕವಾದ್ದರಿಂದ ೧೯೨೫ ರಿಂದ ೧೯೩೧ರ ವರೆಗೆ ಅನ್ವೇಷಣೆಯನ್ನು ನೆರವೇರಿಸಲಾಯಿತು. ಸಿಂಧ್ ಪ್ರಾಂತದಲ್ಲಿ ಹರಪ್ಪ ಸಂಸ್ಕೃತಿಗೆ ಸೇರಿದ ಅನೇಕ ಸಣ್ಣ ವಸತಿಗಳನ್ನು ಕಂಡುಹಿಡಿದದ್ದಲ್ಲದೆ, ಇನ್ನೊಂದು ವಿಶೇಷವಾದ ಸಂಶೋಧನೆ ಎಂದರೆ, ಅಮ್ರಿ ಎಂಬಲ್ಲಿ ಹರಪ್ಪ ಸಂಸ್ಕೃತಿಯ ಪೂರ್ವ ಸಂಸ್ಕೃತಿಯೂ ಹಾಗೂ, ಝುಕಾರ್ ಮತ್ತು ಚನ್ಹುದಾರೋ ಎಂಬ ಸ್ಥಳಗಳಲ್ಲಿ ಹರಪ್ಪ ಸಂಸ್ಕೃತಿಯ ಉತ್ತರ ಸಂಸ್ಕೃತಿಯೂ ಕಂಡು ಹಿಡಿಯಲ್ಪಟ್ಟವು. ಬಲೂಚಿಸ್ಥಾನದಲ್ಲಿ ಕಂಡು ಹಿಡಿಯಲ್ಪಟ್ಟ ಅನೇಕ ಸ್ಥಳಗಳು ಹರಪ್ಪ ಸಂಸ್ಕೃತಿ ಗಿಂತ ಮುಂಚಿನವು, ಕೆಲವು ಹರಪ್ಪ ಸಂಸ್ಕೃತಿಯ ವಸತಿಗಳು, ಇನ್ನೂ ಕೆಲವು ತದನಂತರ ಬಂದ ಸಂಸ್ಕೃತಿಗಳಿಗೆ ಸೇರಿದವುಗಳಾಗಿವೆ.

ಈ ಅವಧಿಯಲ್ಲಿ ನಳಂದ ಮತ್ತು ನಾಗಾರ್ಜುನಕೊಂಡಗಳಲ್ಲಿ ಭೂಶೋಧನೆಗಳು ನಡೆದವು.

## ೩

೧೯೨೮ರಲ್ಲಿ ಮಾರ್ಷಲ್‌ರು ಡೈರಕ್ಟರ್‌ಜನರಲ್‌ರ ಹುದ್ದೆಯಿಂದ ನಿವೃತ್ತರಾದರು. ಮೂರು ವರುಷಗಳ ನಂತರ ಸರ್ವತೋಮುಖವಾಗಿ ವೆಚ್ಚವನ್ನು ಕಡಿಮೆ ಮಾಡಬೇಕೆಂಬ ಸುದ್ದಿ ಹರಡಿತು. ಇದರ ಪರಿಣಾಮವಾಗಿ ೧೯೩೦ರಲ್ಲಿ ಪ್ರಾಚೀನಾನ್ವೇಷಣಾ ಶಾಖೆಯು (ಎಕ್ಸ್ ಪ್ಲೋರೇಷನ್ ಬ್ರಾಂಚ್) ರದ್ದುಮಾಡಲ್ಪಟ್ಟಿದ್ದಲ್ಲದೇ ಪುರಾತತ್ವ ವಿಭಾಗದ ದಿನಂಪ್ರತಿ ಕಾರ್ಯ ಗಳಿಗೆ ಅವಶ್ಯಕವಾದ ಹಣವನ್ನು ಕೂಡ ಬಹುಮಟ್ಟಿಗೆ ಕಡಿಮೆ ಮಾಡಲಾಯಿತು.

ಭೂಶೋಧನಾ ಕಾರ್ಯವನ್ನು ಕೈಗೊಳ್ಳುವಂತೆ ವಿದೇಶಿಯರೇ ಮೊದಲಾದ ಹೊರಗಿನವ ರನ್ನು ಪ್ರೋತ್ಸಾಹಿಸಲು ಪ್ರಾಚೀನಸ್ಮಾರಕ ಸಂರಕ್ಷಣಾ ಕಾನೂನನ್ನು ೧೯೩೧ರಲ್ಲಿ ತಿದ್ದ ಲಾಯಿತು. ಈ ಸೌಲಭ್ಯದಿಂದ ೧೯೩೫-೩೬ರಲ್ಲಿ ಅಮೆರಿಕನ್ ಸ್ಕೂಲ್ ಆಫ್ ಇಂಡಿಕ್ ಅಂಡ್ ಇರಾನಿಯನ್ ಸ್ಟಡೀಸ್ (ಇಂಡಿಯಾ ಮತ್ತು ಇರಾನ್ ವಿಷಯಗಳ ವಿದ್ಯಾಭ್ಯಾಸದ

ಮೆರಿಕನ್ ಸಂಸ್ಥೆ) ಮತ್ತು ಬಾಸ್ಟನ್ ಮ್ಯೂಸಿಯಮ್ ಆಫ್ ಫೈನ್ ಆರ್ಟ್ಸ್ (ಕುಶಲ ವಿದ್ಯೆಯ ಬಾಸ್ಟನ್ ಸಂಗ್ರಹಾಲಯು) ಇವೆರಡೂ ಒಟ್ಟುಗೂಡಿ ಹಿಂದೆ ತಿಳಿಸಿದ ಚನ್ಹುದಾರೋ ಎಂಬಲ್ಲಿ ಸಂಶೋಧನೆಯನ್ನು ಮಾಡಿದವು.

೧೯೩೫ರಲ್ಲಿ ಏಲ್ ಮತ್ತು ಕೆಂಬ್ರಿಡ್ಜ್ ವಿಶ್ವವಿದ್ಯಾಲಯಗಳು, ಭೂಗರ್ಭ ಮತ್ತು ಐತಿಹಾಸಿಕ ಸಂಶೋಧನೆಗಾಗಿ ಹೆಲ್ಮಟ್ ಡಿ ಟೆರಾ ರವರ ನೇತೃತ್ವದಲ್ಲಿ ನಿಯೋಗವೊಂದನ್ನು ಭಾರತಕ್ಕೆ ಕಳುಹಿಸಿಕೊಟ್ಟವು. ನಿಯೋಗವು ಭಾರತದ ವಾಯುವ್ಯ ಸರಹದ್ದಿನಲ್ಲಿ ಶ್ಲಾಘನೀಯವಾದ ಸಂಶೋಧನೆಯನ್ನು ನಡೆಸಿತು.

೧೯೩೯ರಲ್ಲಿ ಪ್ರಾಚೀನಾವಶೇಷಗಳ ಅನ್ವೇಷಣ ಮತ್ತು ಭೂಶೋಧನಾ ನೀತಿಯ ಬಗ್ಗೆ ಸರ್ಕಾರಕ್ಕೆ ಸಲಹೆ ಕೊಡಲು ಆಹ್ವಾನಿಸಲ್ಪಟ್ಟ ಪ್ರಖ್ಯಾತ ಬ್ರಿಟಿಷ್ ಪುರಾತತ್ವಜ್ಞ ಸರ್ ಲಿಯನಾರ್ಡ್ ವುಲಿ ಯವರು ಭಾರತ ಪುರಾತತ್ವ ವಿಭಾಗದ ಭೂಶೋಧನಾ ಕಲಾಕೌಶಲ್ಯವನ್ನು ಮತ್ತು ನೀತಿಯನ್ನು ತೀವ್ರವಾಗಿ ಖಂಡಿಸಿದರು. ಈ ಖಂಡನೆಯು ಅವಸರದಲ್ಲಿ ಪರಿಗಣಿಸಿದ ಫಲಿತಾಂಶವಾಗಿಯೂ, ಪಕ್ಷಪಾತದಿಂದ ಕೂಡಿದ್ದಾಗಿಇದ್ದರೂ, ಇದರಲ್ಲಿ ಸ್ವಲ್ಪಮಟ್ಟಿನ ಸತ್ಯಾಂಶ ಇಲ್ಲದೆ ಇರಲಿಲ್ಲ. ಭಾರತೀಯ ಪುರಾತತ್ವಜ್ಞರು ಯೂರೋಪ್ ಮತ್ತು ಅಮೆರಿಕಾ ಖಂಡಗಳ ಭೂಶೋಧನಾ ಕಲಾಕೌಶಲ್ಯ ಪ್ರಗತಿಯನ್ನರಿಯದೇ ಇದ್ದ ಕಾರಣ, ಇವರು ಅನುಸರಿಸುತ್ತಿದ್ದ ಪದ್ಧತಿಗಳು ತುಂಬಾ ಹಳೆಯದಾಗಿದ್ದವು. ಆಳವಾಗಿ ಅಗೆದು ಸಂಸ್ಕೃತಿಗಳ ಪರಂಪರೆಯನ್ನು ನಿರ್ಧರಿಸಲು ಯಾವ ಪ್ರಯತ್ನವನ್ನೂ ಮಾಡಿರಲಿಲ್ಲ; ಮತ್ತು ಭೂಶೋಧನೆಗೆ ಅಗತ್ಯವಾದ ಸ್ಥಳಗಳನ್ನು ಚುನಾಯಿಸುವುದರಲ್ಲಿ ಯಾವ ಕ್ರಮಬದ್ಧವಾದ ಯೋಜನೆಯನ್ನು ಕೈಗೊಂಡಿರಲಿಲ್ಲ. ಇದಕಾರಣ ದೇಶದ ಹೆಚ್ಚು ಭಾಗದ ಪುರಾತತ್ವವು ಅಂಧಕಾರದಲ್ಲಿಯೇ ಇತ್ತು.

೧೯೪೦ ರಿಂದ ೧೯೪೪ರ ವರೆವಿಗೆ ಪುರಾತತ್ವ ವಿಭಾಗವು ಬರೇಲಿ ಜಿಲ್ಲೆಯ ಅಹಿಚ್ಛತ್ರದಲ್ಲಿ ಭೂಶೋಧನೆ ನಡೆಯಿಸಿ ಕ್ರಿ ಪೂ ಒಂದನೇ ಸಹಸ್ರಾಬ್ಧಿ ಉತ್ತರಾರ್ಧದಿಂದ ಪ್ರಾರಂಭಿಸಿ ಕ್ರಿ. ಶ. ೧೧೦೦ರ ವರೆಗೆ ಗಂಗಾನದಿ ಬಯಲಿನ ಮೇಲ್ಭಾಗದ ಸಾಂಸ್ಕೃತಿಕ ಪರಂಪರೆಯನ್ನು ಸ್ಥಾಪಿಸಿದುದು ಇದೇ ಮೊದಲು.

## ೪

೧೯೪೪ರಲ್ಲಿ ಡಾಕ್ಟರ್ ರಾಬರ್ಟ ಎರಿಕ್ ಮಾರ್ಟಿಮರ್ ವ್ಹೀಲರ್ ರವರು ಡೈರಕ್ಟರ್ ಜನರಲ್‌ರಾಗಿ ನೇಮಿಸಲ್ಪಟ್ಟರು. ಅವರ ನೇತೃತ್ವದ ಮುಂದಿನ ನಾಲ್ಕು ವರ್ಷಗಳಲ್ಲಿ ಭಾರತ ಪುರಾತತ್ವ ವಿಭಾಗದಲ್ಲಿ ಸರ್ವತೋಮುಖವಾದ ಅಭಿವೃದ್ಧಿಯಾಯಿತು. ಅವರು ಸರ್ಕಲ್‌ಗಳನ್ನು ಮತ್ತು ಸಂಗ್ರಹಾಲಯಗಳನ್ನು ಪುನರ್ರಚಿಸಿದ್ದಲ್ಲದೆ, ರಾವಲ್ಪಿಂಡಿ ಜಿಲ್ಲೆಯ ತಕ್ಷಶಿಲೆಯಲ್ಲಿ, ಪಾಂಡಿಚೆರಿ ಹತ್ತಿರವಿರುವ ಅರಿಕಮೆಡುವಿನಲ್ಲಿ, ಹರಪ್ಪದಲ್ಲಿ ಮತ್ತು ಮೈಸೂರು ಸಂಸ್ಥಾನದಲ್ಲಿರುವ ಬ್ರಹ್ಮಗಿರಿಯಲ್ಲಿಯೂ ಅವರು ಕೈಗೊಂಡ ಭೂಶೋಧನೆಗಳಲ್ಲಿ ವಿಭಾಗದ ಅಧಿಕಾರಿಗಳನ್ನೂ ಮತ್ತು ಇತರರನ್ನು ನವೀನ ರೀತಿಯ ಭೂಶೋಧನೆಯಲ್ಲಿ ತರಬೇತು ಮಾಡಿದರು. ಈ ಪ್ರತಿಯೊಂದು ಭೂಶೋಧನೆಯಿಂದಲೂ ಮಹತ್ವದ ಫಲಿತಾಂಶಗಳು ದೊರತಿವೆ.

೫

೧೯೫೦ನೆ ಭಾರತ ರಾಜ್ಯಾಂಗ ರಚನೆಯಲ್ಲಿ ಪುರಾತತ್ವದ ಸ್ಥಾನವು ಸ್ವಲ್ಪಮಟ್ಟಿ ಬದಲಾಯಿಸಿತು. ಪುರಾತತ್ವವು ೧೯೧೯ ಮತ್ತು ೧೯೩೫ನೇ ಇಸವಿಗಳ ಗವರ್ನಮೆಂಟ್ ಆಫ಼ ಇಂಡಿಯಾ ಅಕ್ಟ್‌ಗಳಪ್ರಕಾರ ಕೇಂದ್ರ ವಿಷಯವಾಗಿರವೆ ಕೆಳಗೆ ಸೂಚಿಸಿದಂ ನಿರ್ಧರಿಸಲಾಗಿದೆ:—

(೧) ವಿಧಾನಸಭೆಯ ಕಾನೂನು ಪ್ರಕಾರವಾಗಲೀ, ಜಾಹಿರಾತು ಪ್ರಕಾರವಾಗಲಿ ರಾಷ್ಟ್ರೀಯ ಸ್ಮಾರಕಗಳೆಂದು ಘೋಷಿಸಲ್ಪಟ್ಟ ಎಲ್ಲಾ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರ ಗಳು, ಪ್ರಾಚೀನ ಸ್ಥಳಗಳು ಹಾಗೂ ಅವಶೇಷಗಳು ಕೇಂದ್ರ ಸರ್ಕಾರದ ಆಡಳಿತದಲ್ಲಿ ತಕ್ಕದ್ದು.

(೨) ಮೊದಲನೇ ವರ್ಗಕ್ಕೆ ಸೇರದಿರುವ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳ ಪ್ರಾಂತೀಯ ಸರ್ಕಾರಗಳ ಅಧೀನದಲ್ಲಿರತಕ್ಕದ್ದು.

(೩) ಮೊದಲನೇ ವರ್ಗಕ್ಕೆ ಸೇರಿರುವ ಪುರಾತತ್ವೀಯ ಹಾಗೂ ಐತಿಹಾಸಿಕ ಸ್ಥಳಗ ಮತ್ತು ಅವಶೇಷಗಳ ಮೇಲೆ ಕೇಂದ್ರ ಮತ್ತು ಪ್ರಾಂತೀಯ ಸರ್ಕಾರಗಳಿಗೆ ಅಧಿಕಾರ ಉಂಟು

ಈ ಹಿಂದೆ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾನೂನಿಗೊಳಪಟ್ಟ (ಏಷಂಟ್ ಮಾನ ಮೆಂಟ್ಸ್ ಪ್ರಿಸರ್ವೇಷನ್ ಅಕ್ಟ್) ಸ್ಮಾರಕಗಳನ್ನು, ಸ್ಥಳಗಳನ್ನು ಮತ್ತು ಸ್ವಾತಂತ್ರ ಪಡೆಯ ವುದಕ್ಕಿಂತ ಮುಂಚೆ ಇಂಡಿಯನ್ ಸ್ಟೇಟ್ಸ್ ಎಂದು ಕರೆಯಲ್ಪಡುತ್ತಿದ್ದ ಸಂಸ್ಥಾನಗಳಲ್ಲಿರು ಅನೇಕ ಸ್ಮಾರಕಗಳನ್ನೂ, ರಾಷ್ಟ್ರೀಯ ಪ್ರಾಮುಖ್ಯತೆಯುಳ್ಳ ಸ್ಮಾರಕಗಳೆಂದು ಪರಿಗಣಿಸು ಕಾನೂನನ್ನು ೧೯೫೧ರಲ್ಲಿ ವಿಧಾನಸಭೆಯು ಜಾರಿಗೆ ತಂದಿತು. ಈ ಮೊದಲು ಸಂಸ್ಥಾನಗ ಸ್ಮಾರಕಗಳ ಮೇಲೆ ಕೇಂದ್ರ ಸರ್ಕಾರಕ್ಕೆ ಯಾವ ಅಧಿಕಾರವೂ ಇರಲಿಲ್ಲ.

ರಾಜ್ಯಾಂಗ ರಚನೆಯ ವಿಧಿ ಪ್ರಕಾರ ಪ್ರಾಂತೀಯ ಸರ್ಕಾರಗಳು ತಮ್ಮ ಅಧೀನದಲ್ಲಿರು ಸ್ಮಾರಕಗಳನ್ನು ಸಂರಕ್ಷಿಸುವುದಕ್ಕೋಸ್ಕರ ಕಾನೂನುಗಳನ್ನು ಮತ್ತು ಸಂಸ್ಥೆಗಳನ್ನು ರಚಿ ಬೇಕೆಂದು ಹೇಳಲಾಗಿದೆ. ಕೆಲವು ಪ್ರಾಂತಗಳು ಇದಕ್ಕೆ ಬೇಕಾದ ಸಾಧನೆಗಳನ್ನು ಈಗಾಗಲೆ ಹೊಂದಿವೆ. ಇನ್ನು ಕೆಲವು ಪ್ರಾಂತಗಳು ತಕ್ಕ ಏರ್ಪಾಡುಗಳನ್ನು ಮಾಡುತ್ತಿವೆ.

೬

ಇಂಡಿಯನ್ ಯೂನಿಯನ್ನಿನಲ್ಲಿ ಸಂಸ್ಥಾನಗಳು ವಿಲೀನವಾಗುವುದಕ್ಕೆ ಮುಂಚೆ ಅವುಗಳ ನಡೆಸಿದ ಪುರಾತತ್ವಕಾರ್ಯವನ್ನು ತಿಳಿಸದ ಹೊರತು ಭಾರತ ಪುರಾತತ್ವ ಸಂಶೋಧನಾ ಇ ಹಾಸವು ಪೂರ್ತಿಯಾಗುವುದಿಲ್ಲ. ೧೯೦೦ರ ಲಾಗಾಯ್ತು ಮೈಸೂರು ಸಂಸ್ಥಾನದಲ್ಲಿ ಪುರಾತತ ಇಲಾಖೆಯೊಂದಿತ್ತು. ಸ್ವಲ್ಪಕಾಲಾನಂತರ ಕಾಶ್ಮೀರ, ಪುದುಕೋಟೆ ಮತ್ತು ಮಯೂರ್‌ಭಂ ಸಂಸ್ಥಾನಗಳು, ಕಾಲಕ್ರಮೇಣ ಹೈದರಾಬಾದ್, ಗ್ವಾಲಿಯರ್, ತಿರುವಾಂಕೂರ್, ಕೊಚಿ ಭೋಪಾಲ್, ಬರೋಡ ಮತ್ತು ಜಯಪುರ್ ಸಂಸ್ಥಾನಗಳು 'ಪುರಾತತ್ವ' ಇಲಾಖೆಗಳನ್ನು ಸ್ಥಾ ಸಿದವು. ಇವುಗಳಲ್ಲಿ ಕೆಲವು ತಮಗೆ ಸೇರಿದ ಸ್ಮಾರಕಗಳನ್ನು ರಕ್ಷಿಸಿ ಜೀರ್ಣೋದ್ಧಾರ ಮಾ ದ್ದಲ್ಲದೇ ಭೂಶೋಧನೆಗಳನ್ನುಸಹ ಕೈಗೊಂಡು ಅನೇಕ ಫಲಕಾರಿಯಾದ ಕಾರ್ಯಗಳನ

ಾಡಿದವು. ಕೆಲವು ಪುರಾತತ್ವ ಇಲಾಖೆಗಳಿಗೆ ಕೇಂದ್ರ ಸರ್ಕಾರದ ಹಣಕಾಸಿನ ಸಹಾಯವೂ ುತ್ತು ಸಲಹೆಯೂ ದೊರಕಿದವು.

ಭಾರತವು ಸ್ವತಂತ್ರವಾದನಂತರ ಸಂಸ್ಥಾನಗಳೆಲ್ಲಾ ವಿಲೀನವಾದ ಕಾರಣ ಅವುಗಳ ುಖ್ಯ ಸ್ಮಾರಕಗಳನ್ನೆಲ್ಲಾ ಕೇಂದ್ರ ಸರ್ಕಾರವು ರಾಷ್ಟ್ರೀಯ ಸ್ಮಾರಕಗಳೆಂದು ಪರಿಗಣಿಸಿ, ುರಾತತ್ವ ಇಲಾಖೆಯ ಅಧಿಕಾರಿಗಳನ್ನು ಕೂಡ ಬಹುಮಟ್ಟಿಗೆ ಕೇಂದ್ರ ಪುರಾತತ್ವ ಇಲಾಖೆಗೆ ೯೫೩ರಲ್ಲಿ ಸೇರಿಸಿಕೊಳ್ಳಲಾಯಿತು. ಇದೇ ರೀತಿ ೧೯೫೮ರಲ್ಲಿ ಜಮ್ಮು ಮತ್ತು ಕಾಶ್ಮೀರ ಂಸ್ಥಾನದ ಪ್ರಾಚೀನ ಸ್ಮಾರಕಗಳನ್ನು ಮತ್ತು ಅಧಿಕಾರಿಗಳನ್ನು ಸೇರಿಸಿಕೊಳ್ಳಲಾಯಿತು. ಾರತ ಪುರಾತತ್ವದ ಸಂಘಟನೆಯು ಈಗ ಸಂಪೂರ್ಣವಾಗಿದೆ.

## ೭

ಭಾರತ ಸರ್ಕಾರದ ವಿಜ್ಞಾನ ಸಂಶೋಧನೆ ಹಾಗೂ ಸಾಂಸ್ಕೃತಿಕ ವಿಷಯಗಳ ಮಂತ್ರಿ ುಂಡಳಕ್ಕೆ ಸೇರಿದ ಕೇಂದ್ರ ಪುರಾತತ್ವ ವಿಭಾಗ ಅಖಿಲ ಭಾರತವನ್ನಾವರಿಸಿರುವ ಮಹತ್ತರವಾದ ಂಸ್ಥೆ. ಪ್ರಕೃತದಲ್ಲಿ ಈ ಸಂಸ್ಥೆಯು ಕೆಳಗೆ ತಿಳಿಸಿದಂತೆ ಕಾರ್ಯವನ್ನು ನಿರ್ವಹಿಸುತ್ತಿದೆ:—

(೧) ಈ ವಿಭಾಗದ ಡೈರಕ್ಟರ್ ಜನರಲ್‌ರ ಮುಖ್ಯ ಕಛೇರಿಯು ನವದೆಹಲಿಯಲ್ಲಿದೆ. ಇವರ ಸಹಾಯಕರಾಗಿ ಒಬ್ಬ ಜಾಯಿಂಟ್ ಡೈರಕ್ಟರ್ ಜನರಲ್, ಮೂವರು ಡೆಪ್ಯುಟಿ ಡೈರಕ್ಟರ್ ಜನರಲ್, ಒಬ್ಬ ಆರ್ಕಿಯಲಾಜಕಲ್ ಎಂಜಿನಿಯರ್, ಒಬ್ಬ ಅಸಿಸ್ಟೆಂಟ್ ಆರ್ಕಿಯಲಾಜಿಕಲ್ ಎಂಜಿನಿಯರ್ ಮತ್ತು ಒಬ್ಬ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಇದ್ದಾರೆ. ೧೯೫೯ನೇ ಅಕ್ಟೋಬರ್ ೧೫ ರಿಂದ ಪ್ರಾಯೋಗಿಕ ಪುರಾತತ್ವದಲ್ಲಿ ಶಿಕ್ಷಣಕೊಡುವ ಉದ್ದೇಶದಿಂದ ಪುರಾತತ್ವ ವಿದ್ಯಾಲಯ (ಸ್ಕೂಲ್ ಆಫ್ ಆರ್ಕಿಯಾಲಜಿ) ವೊಂದನ್ನು ನಡೆಸಲಾಗುತ್ತಿದೆ. ಈ ವಿದ್ಯಾಲಯಕ್ಕೆ ಒಬ್ಬ ಡೈರಕ್ಟರ್ ಇದ್ದಾರೆ.

(೨) ಭಾರತವನ್ನು ಒಂಬತ್ತು ಸರ್ಕಲ್‌ಗಳಾಗಿ ವಿಭಾಗಿಸಲಾಗಿದೆ. ಪ್ರತಿಯೊಂದು ಸರ್ಕಲ್ಲಿಗೂ ಒಬ್ಬೊಬ್ಬ ಸೂಪರಿಂಟೆಂಡೆಂಟ್ ಮತ್ತು ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಇದ್ದಾರೆ. ಕೆಲವು ಸರ್ಕಲ್‌ಗಳಲ್ಲಿ ಒಬ್ಬ ಅಥವಾ ಹೆಚ್ಚು ಅಸಿಸ್ಟೆಂಟ್ ಎಂಜನಿಯರ್‌ಗಳಿದ್ದಾರೆ. ಸರ್ಕಲ್‌ಗಳ ಹೆಸರು ಮತ್ತು ಅವುಗಳ ಮುಖ್ಯ ಕಛೇರಿ ಈ ಕೆಳಗೆ ಕಂಡಂತಿವೆ:—

| | | | |
|---|---|---|---|
| ವಾಯುವ್ಯ ಮಂಡಲ | (ನಾರ್ತ್ ವೆಸ್ಟರ್ನ್ ಸರ್ಕಲ್) | ... | ನವದೆಹಲಿ |
| ಉತ್ತರ ಮಂಡಲ | (ನಾರ್ದರ್ನ್ ಸರ್ಕಲ್) | ... | ಆಗ್ರ |
| ಮಧ್ಯ-ಪೂರ್ವ ಮಂಡಲ | (ಮಿಡ್ ಈಸ್ಟರ್ನ್ ಸರ್ಕಲ್) | ... | ಪಾಟ್ನ |
| ಪೂರ್ವ ಮಂಡಲ | (ಈಸ್ಟರ್ನ್ ಸರ್ಕಲ್) | ... | ಕಲ್ಕತ್ತ |
| ಆಗ್ನೇಯ ಮಂಡಲ | (ಸೌತ್ ಈಸ್ಟರ್ನ್ ಸರ್ಕಲ್) | ... | ವಿಶಾಖಪಟ್ಟಣ |
| ದಕ್ಷಿಣ ಮಂಡಲ | (ಸದರ್ನ್ ಸರ್ಕಲ್) | ... | ಮದ್ರಾಸ್ |
| ನೈರುತ್ಯ ಮಂಡಲ | (ಸೌತ್-ವೆಸ್ಟರ್ನ್ ಸರ್ಕಲ್) | ... | ಔರಂಗಾಬಾದ್ |
| ಪಶ್ಚಿಮ ಮಂಡಲ | (ವೆಸ್ಟರ್ನ್ ಸರ್ಕಲ್) | ... | ಬರೋಡ |
| ಮಧ್ಯವರ್ತಿ ಮಂಡಲ | (ಸೆಂಟ್ರಲ್ ಸರ್ಕಲ್) | ... | ಭೂಪಾಲ್ |

ಇವುಗಳಲ್ಲದೆ ಜಮ್ಮು ಮತ್ತು ಕಾಶ್ಮೀರಗಳನ್ನೊಳಗೊಂಡ ಸಣ್ಣ ಸರ್ಕಲ್‌ಗೆ ಶ್ರೀನಗರ ದಲ್ಲಿ ಸೂಪರಿಂಟೆಂಡೆಂಟ್‌ರೊಬ್ಬರಿದ್ದಾರೆ. ಪ್ರಾಚೀನ ಸ್ಮಾರಕಗಳನ್ನು ಸಂರಕ್ಷಿಸುವುದೇ

ಸರ್ಕಲ್‌ಗಳ ಮುಖ್ಯ ಕರ್ತವ್ಯ. ಅವು ತಮ್ಮ ಸರಹದ್ದಿನಲ್ಲಿ ಸಾಮಾನ್ಯ ಪುರಾತತ್ವ ಕಾಯ
ಗಳಿಗೆಲ್ಲ ಜವಾಬ್ದಾರರಾಗಿರುವುದಲ್ಲದೇ, ಪ್ರಾಚೀನಾವಶೇಷಗಳ ಅನ್ವೇಷಣೆ, ಮತ್ತು ಭ
ಶೋಧನೆಯನ್ನು ಸಹ ಮಾಡಬಹುದು. ಕಳೆದ ಹತ್ತು ವರ್ಷಗಳಲ್ಲಿ ವಾಯುವ್ಯ ಮಂಡಲ
ನವದೆಹಲಿ ಸಮೀಪದಲ್ಲಿರುವ "ಪುರಾನ ಕಿಲ್ಲ" ದೆಹಲಿಯ ಕೋಟೆ ಮತ್ತು ಯಮುನಾ ನ
ಬಯಲಿನ ಮೇಲ್ಭಾಗದಲ್ಲಿರುವ ಅಲಂಗೀರ್‌ಪುರ್‌ನಲ್ಲಿಯೂ, ಉತ್ತರ ಮಂಡಲವು ಮಥುರ
ಮತ್ತು ಔಧ್ ಜಿಲ್ಲೆಯಲ್ಲಿರುವ ಶ್ರಾವಸ್ತಿಯಲ್ಲಿಯೂ, ಮಧ್ಯಪೂರ್ವ ಮಂಡಲವು ಬಿಹಾರ
ಪ್ರಾಂತದಲ್ಲಿರುವ ರಾಜ್‌ಗೀರ್‌ನಲ್ಲಿಯೂ, ಪೂರ್ವಮಂಡಲವು ಪಶ್ಚಿಮ ಬಂಗಾಲದಲ್ಲಿರುವ ಬೀರ
ಭಾನ್‌ಪುರ, ತಾಮುಲುಕ್ ಮತ್ತು ಒರಿಸ್ಸಾದಲ್ಲಿರುವ ಜೌಗಡ, ರತ್ನಗಿರಿ ಹಾಗೂ ಉದಯಗಿ
ಯಲ್ಲಿಯೂ, ಆಗ್ನೇಯ ಮಂಡಲವು ಆಂಧ್ರಪ್ರದೇಶದಲ್ಲಿರುವ ಸಾಲಿಹುಂಡಂ ಮತ್ತು ಕೋಟ
ನಲ್ಲಿಯೂ, ನೈರುತ್ಯ ಮಂಡಲವು ಗೋದಾವರಿ ಬಯಲಿನಲ್ಲಿರುವ ಬಹಾಲ್, ತೇಕ್ವಾಡ, ದೈಮಾ
ಬಾದ್, ತಪತಿನದಿ ಬಯಲಿನಲ್ಲಿರುವ ಪ್ರಕಾಶ್, ಮತ್ತು ಮೈಸೂರ್ ಪ್ರಾಂತದಲ್ಲಿರುವ ಮಾಸ
ಯಲ್ಲೂ ; ಪಶ್ಚಿಮ ಮಂಡಲವು ಗುಜರಾತಿನಲ್ಲಿರುವ ಅಮ್ರೇಲಿ, ರಂಗಪುರ, ಮೊಟಾಮಾಚಿಯಾಲ
ಮತ್ತು ಲೋಥಲ್ ಎಂಬಲ್ಲಿ ಭೂಶೋಧನೆಗಳನ್ನು ನಡಿಯಿಸಿವೆ.

(೩) ನಾಗಪುರ್‌ದಲ್ಲಿರುವ ಭೂಶೋಧನಾ ಶಾಖೆಯ ಸೂಪರಿಂಟೆಂಡ್‌ರವರು ಶ್ರೇಷ್ಠ
ವಾದ ಭೂಶೋಧನೆಗಳನ್ನು ಕೈಗೊಳ್ಳುತ್ತಾರೆ. ವ್ಹೀಲರ್‌ರ ನೇತೃತ್ವದಲ್ಲಿ ನಡೆದ ಭೂಶೋಧನ
ಗಳು ಈ ಶಾಖೆಯಿಂದ ಕೈಗೊಳ್ಳಲ್ಪಟ್ಟಿದ್ದವು. ಆನಂತರ ಈ ಶಾಖೆಯು ಒರಿಸ್ಸಾ
ದಲ್ಲಿರುವ ಶಿಶುಪಾಲಘಡ, ಗಂಗಾನದಿಯ ಬಯಲಿನ ಮೇಲ್ಭಾಗದಲ್ಲಿರುವ ಹಸ್ತಿನಾಪುರ
ಸಟ್ಲೆಜ್ ನದಿ ಬಯಲಿನ ಮೇಲ್ಭಾಗದಲ್ಲಿರುವ ರೂಪರ್, ಬಾರ, ಸಲೋರ ಹಾಗೂ ಮಾಳ್ವ
ದಲ್ಲಿರುವ ನಾಗದಾ ಮತ್ತು ಉಜ್ಜಯನಿಯಲ್ಲಿ ಭೂಶೋಧನೆಯನ್ನು ಕೈಗೊಂಡಿತು.

(೪) ಉದಕಮಂಡಲದಲ್ಲಿರುವ ಲಿಪಿ ಶಾಸ್ತ್ರ ಶಾಖೆಯಲ್ಲಿ ಒಬ್ಬ ಸರ್ಕಾರಿ ಲಿಪಿ ಶಾಸ್ತ್ರಜ್ಞರು
(ಗವರ್ನಮೆಂಟ್ ಎಪಿಗ್ರಫಿಸ್ಟ್), ಇಬ್ಬರು ಸೂಪರಿಂಟೆಂಡೆಂಟರು ಮತ್ತು ಮೂವರು
ಅಸಿಸ್ಟೆಂಟ್ ಸೂಪರಿಂಟೆಂಡೆಂಟರು ಇದ್ದಾರೆ. ಪರ್ಷಿಯನ್ ಮತ್ತು ಅರಾಬಿಕ್ ಶಾಸನಗಳಿಗಾಗಿ
ಒಬ್ಬ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್‌ರು ನಾಗಪುರದಲ್ಲಿದ್ದಾರೆ. ಈ ಶಾಖೆಯ ಕರ್ತವ್ಯವು
ಜನಸಾಮಾನ್ಯರಿಗೆ ತಿಳಿದ ವಿಷಯವಾಗಿದೆ. ದೇಶಾದ್ಯಂತದಿಂದ ಶಾಸನಗಳನ್ನು ಶೇಖರಿಸಿ
ಪರಿಶೋಧಿಸಿ, ಪ್ರಕಟಿಸುವುದು ಇವರ ಕರ್ತವ್ಯ. ಮುಖ್ಯವಾಗಿ ಶಾಸನಗಳ ಆಧಾರದಮೇಲೆ
ಬರೆಯಲ್ಪಟ್ಟ ನಮ್ಮ ದೇಶದ ಇತಿಹಾಸವನ್ನು ಪುನರ್ರಚಿಸುವುದಕ್ಕೆ ಈ ಶಾಖೆಯ ಸಂಶೋಧನ
ಗಳಿಂದ ಬಹಳ ಸಹಾಯವಾಗಿದೆ.

(೫) ಡೆಹರಾಡೂನಿನಲ್ಲಿರುವ ಪುರಾತತ್ವ ರಸಾಯನ ಶಾಸ್ತ್ರದ ಶಾಖೆಯು (ಆರ್ಕಿಯ
ಲಾಜಿಕಲ್ ಕೆಮಿಸ್ಟ್) ಪ್ರಾಚೀನ ಸ್ಮಾರಕಗಳು, ವಿಗ್ರಹಗಳು, ಚಿತ್ರಗಳು ಮತ್ತು ಸಂಗ್ರಹಾಲಯ
ಗಳಲ್ಲಿರುವ ಪ್ರಾಚೀನಾವಶೇಷಗಳ ನಿರ್ಮಲೀಕರಣ, ಹಾಗೂ ಭದ್ರತೆ ಮತ್ತು ಪುರಾ
ತತ್ವೀಯ ರಸಾಯನ ಶಾಸ್ತ್ರದಲ್ಲಿ ಸಂಶೋಧನೆ ನಡೆಸುವುದೇ ಮೊದಲಾದ ಕಾರ್ಯಗಳನ್ನು
ನಿರ್ವಹಿಸುತ್ತದೆ. ಪುರಾತತ್ವ ರಸಾಯನ ಶಾಸ್ತ್ರಜ್ಞರಿಗೆ ಡೆಹರಾಡೂನ್ ಮತ್ತು ಹೈದರಾಬಾದ
ನಲ್ಲಿರುವ ಪುರಾತತ್ವ ರಸಾಯನ ಉಪಶಾಸ್ತ್ರಜ್ಞರು (ಅಸಿಸ್ಟೆಂಟ್ ಆರ್ಕಿಯಾಲಾಜಿಕಲ್ ಕೆಮಿಸ್ಟರು)
ಸಹಾಯಕರಾಗಿದ್ದಾರೆ. ಪ್ರತಿಯೊಬ್ಬರ ಕೈಕೆಳಗೂ ಇಬ್ಬರು ಜೂನಿಯರ್ ಆರ್ಕಿಯಾಲಾಜಿಕಲ್
ಕೆಮಿಸ್ಟರು ಇದ್ದಾರೆ. ಡೆಹರಾಡೂನ್, ಭುವನೇಶ್ವರ್, ಔರಂಗಾಬಾದ್ ಮತ್ತು ಹೈದರಾ
ಬಾದ್‌ನಲ್ಲಿರುವ ನಾಲ್ಕು ಜೂನಿಯರ್ ಆರ್ಕಿಯಾಲಾಜಿಕಲ್ ಕೆಮಿಸ್ಟರು ಪ್ರಾಚೀನ ಸ್ಮಾರಕಗಳಲ್ಲಿ
ನಡೆಯಬೇಕಾದ ರಾಸಾಯನಿಕ ಕಾರ್ಯಗಳಿಗೆ ಜವಾಬ್ದಾರರಾಗಿದ್ದಾರೆ.

(೬) ನಾಗಪುರದಲ್ಲಿರುವ ಪ್ರಾಗಿತಿಹಾಸ ಶಾಖೆಯಲ್ಲಿ ಒಬ್ಬ ಸೂಪರೆಂಟೆಂಡೆಂಟ್ ಮತ್ತು ಬ್ಬ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್‌ರು ಇದ್ದಾರೆ. ಈ ಶಾಖೆಯು ಶಿಲಾಯುಗದ ಪುರಾತತ್ವ ಷಯಗಳಲ್ಲಿ ಸಂಶೋಧನೆಗಳನ್ನು ನಡೆಸುತ್ತಿದೆ. ಸ್ಥಾಪಿಸಿ ಸ್ವಲ್ಪ ಕಾಲವಾಗಿದ್ದರೂ, ಈ ಾಖೆಯು ತಪತಿ ನದಿಯ ಬಯಲು, ಬುಂಡೇಲ್ ಖಂಡದ ನದಿಗಳ ಬಯಲು ಮತ್ತು ಬಿಯಾಸ್ ್ಯನಗಂಗ ನದಿಗಳ ಬಯಲನ್ನು ಪರಿಶೋಧಿಸಿದೆ.

(೭) ಕಲ್ಕತ್ತದಲ್ಲಿರುವ ಸಂಗ್ರಹಾಲಯುಗಳ ಶಾಖೆಯಲ್ಲಿ ಒಬ್ಬ ಸೂಪರಿಂಟೆಂಡೆಂಟ್ ುತ್ತ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಇದ್ದಾರೆ. ಪುರಾತತ್ವ ವಿಭಾಗಕ್ಕೆ ಸೇರಿದ ದೆಹಲಿ ೋಟೆ ಸಂಗ್ರಹಾಲಯ, ಫೋರ್ಟ್ ಸೆಂಟ್ ಜಾರ್ಜ್ ಸಂಗ್ರಹಾಲಯ, ಶ್ರೀರಂಗಪಟ್ಟಣದಲ್ಲಿರುವ ಪ್ಪುಸುಲ್ತಾನರ ಅರಮನೆಯ ಸಂಗ್ರಹಾಲಯ ಮತ್ತು ಸಾರ್‌ನಾಥ್, ನಲಂದ, ಬುದ್ಧ ಯಾ, ಸಾಂಚಿ, ಖಾಜುರಹೊ, ನಾಗಾರ್ಜುನ ಕೊಂಡ, ಹಂಪಿ ಹಾಗೂ ಕೊಂಡಾಪುರ ಲ್ಲಿರುವ ಪ್ರಾಚೀನವಸ್ತು ಸಂಗ್ರಹಾಲಯುಗಳ ಮೇಲ್ವಿಚಾರಿ ಈ ಶಾಖೆಗೆ ಸೇರಿದ್ದು. ದಲ್ಲದೆ ಸಾರನಾಥ್, ಸಾಂಚಿ ಮತ್ತು ಮದ್ರಾಸಿನಲ್ಲಿ ಅವರವರ ವಿಭಾಗಕ್ಕೆ ಸೇರಿದ ಸಂಗ್ರಹಾ ಯಗಳ ಮೇಲ್ವಿಚಾರಣೆಗಾಗಿ ಜೂನಿಯರ್ ಕೀಪರ್‌ಗಳಿದ್ದಾರೆ.

(೮) ಉದ್ಯಾನವನಗಳ ಶಾಖೆಗೆ ಒಬ್ಬ ಸೂಪರಿಂಟೆಂಡೆಂಟ್‌ರು ಆಗ್ರಾದಲ್ಲಿಯೂ ಇಬ್ಬರು ಸಿಸ್ಟೆಂಟ್ ಸೂಪರಿಂಟೆಂಡೆಂಟ್‌ರು ಆಗ್ರ ಮತ್ತು ದೆಹಲಿಯಲ್ಲಿರುತ್ತಾರೆ. ಈ ಶಾಖೆಯು ಲವು ಸ್ಮಾರಕಗಳ ಆವರಣದಲ್ಲಿರುವ ಹೂವಿನ ತೋಟಗಳನ್ನು ನೋಡಿಕೊಳ್ಳುತ್ತದೆ.

(೯) ಇವುಗಳಲ್ಲದೆ ತಾತ್ಕಾಲಿಕ ಪುರಾತತ್ವ ಕೆಲಸಗಳಿಗಾಗಿ ವಿಶೇಷ ಸಂಸ್ಥೆಗಳನ್ನು ್ಥಾಪಿಸಲಾಗುತ್ತಿದೆ. ಉದಾಹರಣೆಗಾಗಿ ನೀರಾವರಿಯೋಜನೆಯಿಂದ ಮುಳಗಿ ಹೋಗಲಿರುವ ನಾಗಾರ್ಜುನಕೊಂಡವನ್ನು ವಿಸ್ತಾರವಾಗಿ ಅಗೆಯಲು ಒಬ್ಬ ಸೂಪರಿಂಟೆಂಡೆಂಟ್ ಮತ್ತು ನಾಲ್ಕು ಅಸಿಸ್ಟೆಂಟ್ ಸೂಪರಿಂಟೆಂಡೆಂಟರುಗಳನ್ನೊಳಗೊಂಡ ಯೋಜನೆಯನ್ನು ಏರ್ಪಡಿಸಿದೆ. ಉತ್ತರ ಮತ್ತು ದಕ್ಷಿಣ ಭಾರತದಲ್ಲಿರುವ ದೇವಾಲಯಗಳ ವಾಸ್ತುಶಿಲ್ಪ ಪರಿಶೋಧನೆಗಾಗಿ ಒಬ್ಬ ಸೂಪರಿಂಟೆಂಡೆಂಟ್‌ರು ಭೂಪಾಲಿನಲ್ಲಿಯೂ, ಇನ್ನೊಬ್ಬರು ಮದ್ರಾಸ್‌ನಲ್ಲಿಯೂ ಇದ್ದಾರೆ. ಪುರಾತತ್ವದ ನಕ್ಷೆಯನ್ನು ತಯಾರಿಸಲು ನಾಗಪುರದಲ್ಲಿ ನಕ್ಷೆಶಾಖೆಯೊಂದನ್ನು ತೆರೆಯಲಾಗಿದೆ.

## ೮

ಪುರಾತತ್ವದಲ್ಲಿ ಭಾಗವಹಿಸಲು ವಿಶ್ವವಿದ್ಯಾಲಯಗಳೂ, ಪ್ರಾಂತೀಯ ಸರ್ಕಾರಗಳೇ ಮೊದಲಾದ ಅನೇಕ ಸಂಸ್ಥೆಗಳು ಮುಂದೆ ಬರುತ್ತಿರುವುದು ಇತ್ತೀಚೆಗೆ ನಮ್ಮ ದೇಶದಲ್ಲಿ ಕಾಣ ಬಹುದಾದ ಶುಭ ಚಿಹ್ನೆ. ಪ್ರಪ್ರಥಮದಲ್ಲಿ ಮುಂದೆ ಬಂದ ಸಂಸ್ಥೆಯೆಂದರೆ ಕಲ್ಕತ್ತಾ ವಿಶ್ವವಿದ್ಯಾ ಲಯ. ಈ ಸಂಸ್ಥೆ ಬಂಗಾಳಾದ ಬಾರ್ಗಡ್ ಎಂಬಲ್ಲಿ ಭೂಶೋಧನೆಯನ್ನು ೧೯೩೭ ರಿಂದ ೧ರ ವರೆಗೆ ನಡೆಸಿತು. ಕಳೆದ ಹತ್ತು ವರ್ಷಗಳಲ್ಲಿ ಪೂನ ಡೆಕ್ಕನ್ ಕಾಲೇಜ್ ಪೋಸ್ಟ್ ಗ್ರಾಜ್ಯು ಯೇಟ್ ಅಂಡ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಪಾಟ್ನ ಕಾಶಿಪ್ರಸಾದ್ ಜಯಸ್ವಾಲ್ ರಿಸರ್ಚ್ ಇನ್‌ಸ್ಟಿ ಟ್ಯೂಟ್. ಅಲಹಾಬಾದ್, ಸಾಗರ್, ಬರೋಡ ಮತ್ತು ವಾರಣಾಸಿ ವಿಶ್ವವಿದ್ಯಾಲಯಗಳೂ, ಹಾಗೂ ರಾಜಸ್ಥಾನ, ಸೌರಾಷ್ಟ್ರ, ಮಧ್ಯಪ್ರದೇಶ, ಬೊಂಬಾಯಿ ಮತ್ತು ಆಂಧ್ರಪ್ರದೇಶದ ಸರ್ಕಾರಗಳೂ ಶ್ಲಾಘನೀಯವಾದ ಕೆಲಸವನ್ನು ಮಾಡಿವೆ. ಈ ಸಂಸ್ಥೆಗಳು ಪ್ರಾಚೀನಾವ

ಶೇಷಾನ್ವೇಷಣೆ ಮಾತ್ರವೇ ಅಲ್ಲದೆ ಶ್ರೇಷ್ಠವಾದ ಭೂಶೋಧನೆಗಳನ್ನು ನಡೆಸಿವೆ. ಮೇಲಿ
ಸಂಸ್ಥೆಗಳು ಈ ಕೆಳಗೆ ಕಂಡಂತೆ ಭೂಶೋಧನೆಗಳನ್ನು ಕೈಗೊಂಡಿವೆ:—

೧. ಡೆಕ್ಕನ್ ಕಾಲೇಜ್, ಪೂನಾ—ಗೋದಾವರಿ ಬಯಲಿನಲ್ಲಿರುವ ನಾಸಿಕ್, ಜೋರ್ವೆ ಮತ್ತು ನೇವಾಸ

೨. ಸಾಗರ ವಿಶ್ವವಿದ್ಯಾಲಯ—ನರ್ಮದಾ ಬಯಲಿನಲ್ಲಿರುವ ತ್ರಿಪುರಿ,

೩. ಬರೋಡ ವಿಶ್ವವಿದ್ಯಾಲಯ, ಮಧ್ಯ ಪ್ರದೇಶದ ಸರ್ಕಾರ, ಮತ್ತು ಡೆಕ್ಕನ್ ಕಾಲೇಜ್ } ನರ್ಮದಾ ಬಯಲಿನಲ್ಲಿರುವ ಮಹೇಶ್ವರ ಮತ್ತು ನವ್ದಾತೋಲ

೪. ಬರೋಡ ವಿಶ್ವವಿದ್ಯಾಲಯ—ಬರೋಡ, ಲಾಂಘಂನಾಜ್, ವಡನಗರ್.

೫. ಸೌರಾಷ್ಟ್ರ ಮತ್ತು ಬೊಂಬಾಯಿ ಸರ್ಕಾರ—ಗುಜರಾತಿನಲ್ಲಿರುವ ಪ್ರಭಾಸಪಟ್ಟಣ ಮತ್ತು ರೋಜಡಿ.

೬. ಮಧ್ಯ ಪ್ರದೇಶ ಸರ್ಕಾರ—ಛತ್ತೀಸ್‌ಗಢ್‌ನಲ್ಲಿರುವ ಧನೋದ ಮತ್ತು ಸಿರಪುರ

೭. ರಾಜಸ್ಥಾನ ಸರ್ಕಾರ—ಉದಯಪುರದ ಹತ್ತಿರವಿರುವ ಅಹಾಡ್.

೮. ಅಲಹಬಾದ್ ವಿಶ್ವವಿದ್ಯಾಲಯ—ಅಲಹಬಾದ್ ಹತ್ತಿರದಲ್ಲಿರುವ ಕೌಶಾಂಬಿ.

೯. ವಾರಣಾಸಿ ವಿಶ್ವವಿದ್ಯಾಲಯ—ರಾಜ್‌ಘಾಟ್.

೧೦. ಜಯಸ್ವಾಲ್ ಇನ್ಸ್ಟಿಟ್ಯೂಟ್—ಪಾಟಲೀಪುತ್ರ, ಮತ್ತು ಸೋನ್‌ಪುರ.

೧೧. ಕಲ್ಕತ್ತಾ ವಿಶ್ವವಿದ್ಯಾಲಯ—ಪಶ್ಚಿಮ ಬಂಗಾಲದಲ್ಲಿರುವ ಚಂದ್ರಕೇತು ಗಢ್.

೧೨. ಆಂಧ್ರಪ್ರದೇಶ ಸರ್ಕಾರ—ಎಲ್ಲೇಶ್ವರಂ ಮತ್ತು ಉತ್ನೂರು.

---

# ಪ್ರಾಚೀನ ಸ್ಮಾರಕ, ಸ್ಥಳ ಮತ್ತು ಇತರ ಅವಶೇಷಗಳಿಗೆ ಸಂಬಂಧಪಟ್ಟ ಕಾನೂನುಗಳು.

ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ವಿಧಿಯನ್ನು ಹಿಂದೇ ವಾಚಕರ ಗಮನಕ್ಕೆ ತರಲಾಗಿದೆ. ಸಾಮಾನ್ಯ ಜನರಿಗೆ ಪ್ರಾಚೀನ ಸ್ಮಾರಕಗಳೇ ಮೊದಲಾದ ಅವಶೇಷಗಳಿಗೆ ಸಂಬಂಧಪಟ್ಟ ಕಾನೂನುಗಳು ಅಪರಿಚಿತವಾಗಿರುವುದರಿಂದ ಅವುಗಳನ್ನು ಸಂಕ್ಷಿಪ್ತವಾಗಿ ಈ ಕೆಳಗೆ ತಿಳಿಸಲಾಗಿದೆ.

೧೮೭೮ನೇ ಇಸ್ವಿ ಇಂಡಿಯನ್ ಟ್ರೆಜರ್ ಟ್ರೊವ್ ಆಕ್ಟ್ (ಭಾರತೀಯ ನಿಕ್ಷೇಪನಿಧಿ ಕಾನೂನು) ಪ್ರಕಾರ ಹತ್ತು ರೂಪಾಯಿಗಳಿಗಿಂತ ಹೆಚ್ಚು ಬೆಲೆಬಾಳುವ 'ನಿಧಿ' ಎಂದರೆ ಭೂಮಿಯಲ್ಲಿ ಬಚ್ಚಿಡಲ್ಪಟ್ಟ ಅಥವಾ ಭೂಗರ್ಭಿತವಾದ ಯಾವುದೇ ವಸ್ತು ಯಾರಿಗಾದರೂ ಸಿಕ್ಕಿದಲ್ಲಿ ಅವರು ಜಿಲ್ಲೆಯ ಕಲೆಕ್ಟರಿಗೆ ತಿಳಿಸುವುದಲ್ಲದೆ ಹತ್ತಿರದಲ್ಲಿರುವ ಖಜಾನೆಯಲ್ಲಿ ಅಮಾನತ್ತು ಇಡತಕ್ಕದ್ದು. ಅಥವಾ ಕಲೆಕ್ಟರಿಗೆ ಸರಿಯಾದ ಜಾಮೀನನ್ನು ಕೊಡತಕ್ಕದ್ದು. ನಿಧಿಯು ಒಂದು ನೂರು ವರ್ಷಗಳು ಹಿಂದಿನದು ಎಂದು ಕಲೆಕ್ಟರಿಗೆ ತಿಳಿದುಬಂದರೆ ಅದರ ಮಾಲಿಕರಾರೂ ಇಲ್ಲವೆಂದೂ ಪ್ರಕಟಿಸಿ, ನಿಧಿ ಸಿಕ್ಕ ಜಾಗದ ಮಾಲೀಕನಿಗೆ ನಿಧಿ ಅಥವಾ ಅದರ ಮೌಲ್ಯದಲ್ಲಿ ಶೇಕಡಾ ೭೫ ರಂತೆಯೂ, ನಿಧಿಯನ್ನು ಕಂಡು ಹಿಡಿದವರಿಗೆ ಶೇಕಡ ೭೫ ರಂತೆಯೂ ಹಂಚಬಹುದು. ಎರಡು ಪಕ್ಷದವರು ಎಂದರೆ ಜಾಗದ ಮಾಲೀಕ ಮತ್ತು ನಿಧಿ ಕಂಡವರು ಒಪ್ಪಂದಕ್ಕೆ ಬಂದಿದ್ದ ಪಕ್ಷದಲ್ಲಿ ಆ ಒಪ್ಪಂದದ ಪ್ರಕಾರ ಹಂಚಬಹುದು. ಜಾಗದ ಮಾಲೀಕನು ನಿಧಿಯ ಮೇಲಿರುವ ತನ್ನ ಹಕ್ಕನ್ನು ಸಾಧಿಸಲು ಬರದಿದ್ದ ಪಕ್ಷದಲ್ಲಿ ಆ ನಿಧಿಯನ್ನು ಪೂರ್ತಿಯಾಗಿ ಕಂಡು ಹಿಡಿದವರಿಗೇ ಕೊಡಬಹುದು.

ಕಲೆಕ್ಟರು ನಿಧಿಯನ್ನು ಹಂಚುವುದರ ಬದಲು ಸರ್ಕಾರಕ್ಕೆ ಸೇರಿಸಿಕೊಂಡು ನಿಧಿಯ ದ್ರವ್ಯದ ಬೆಲೆಗೆ ಅದರ ೧/೫ನೇ ಭಾಗವನ್ನು ಹೆಚ್ಚಾಗಿ ಸೇರಿಸಿ ಹಕ್ಕುದಾರರಿಬ್ಬರಿಗೂ ಮೇಲೆ ಹೇಳಿದಂತೆ ಹಂಚಬಹುದು. ನಿಧಿ ಸಿಕ್ಕ ವಿಷಯವನ್ನು ತಿಳಿಸದಿದ್ದಲ್ಲಿ ಅಥವಾ ಖಜಾನೆಯಲ್ಲಿ ಇಡದಿದ್ದಲ್ಲಿ ಅಥವಾ ನಿಧಿಯನ್ನು ವಿಕಾರಗೊಳಿಸಿದಲ್ಲಿ, ಅವರ ಪಾಲಿಗೆ ಬರತಕ್ಕ ನಿಧಿಯ ಹಕ್ಕನ್ನು ಕಳೆದುಕೊಳ್ಳುವುದಲ್ಲದೇ, ಒಂದು ವರ್ಷ ಕಾರಾಗೃಹವಾಸ ಅಥವಾ ದಂಡಕ್ಕಾಗಲಿ ಅಥವಾ ಎರಡೂ ಶಿಕ್ಷೆಗೆ ಗುರಿಯಾಗುವರು.

ಈ ಕಾನೂನು ಜಾರಿಗೆ ಬಂದಿದ್ದರಿಂದ ಸರ್ಕಾರವು ಪ್ರಾಚೀನ ವಿಗ್ರಹಗಳನ್ನು, ಹುಗಿದಿಟ್ಟ ನಾಣ್ಯಗಳನ್ನು ತನ್ನ ವಶಕ್ಕೆ ತೆಗೆದುಕೊಂಡು, ಅವುಗಳನ್ನು ಸಂಗ್ರಹಾಲಯಗಳಿಗೆ ಒಪ್ಪಿಸಿ, ಅಭಿವೃದ್ಧಿಗೊಳಿಸಲು ಸಹಾಯವಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ನಿಧಿ ಸಿಕ್ಕ ವಿಷಯವನ್ನು ಕಲೆಕ್ಟರ್‌ಗೆ ತಿಳಿಸಿದರೆ ಮತ್ತು ಕಲೆಕ್ಟರ್ ನಿಧಿಯನ್ನು ಸರ್ಕಾರಕ್ಕೆ ಸೇರಿಸಿಕೊಳ್ಳುವುದಾಗಿ ನಿರ್ಧರಿಸಿದರೆ, ಕಂಡುಹಿಡಿದವರಿಗೆ ಮತ್ತು ಮಾಲೀಕರಿಗೆ ನಿಧಿಯ ದ್ರವ್ಯದ ಬೆಲೆಗಿಂತ ೧/೫ ಭಾಗ ಹೆಚ್ಚಾಗಿ ಕೊಡಲಾಗುತ್ತದೆ. ಈ ಸೌಲಭ್ಯವಿದ್ದಾಗ್ಯೂ ದುರದೃಷ್ಟವಶಾತ್ ಮೂಢರು ತಮಗೆ ಸಿಕ್ಕ ನಿಧಿಯನ್ನು ಬಚ್ಚಿಟ್ಟು, ಲೋಹ ವಸ್ತುಗಳನ್ನು ಕರಗಿಸಿ ಬಿಡುತ್ತಾರೆ. ಹೀಗೆ ಮಾಡುವುದರಿಂದ ಇತಿಹಾಸಕ್ಕೆ ಮತ್ತು ಪುರಾತತ್ವದ ಅಭಿವೃದ್ಧಿಗೆ ತೊಂದರೆ ಉಂಟಾಗುತ್ತದೆ.

೧೯೦೪ನೇ ಇಸ್ವಿಯ ಪ್ರಾಚೀನ ಸ್ಮಾರಕ ಸಂರಕ್ಷಣಾ ವಿಧಿಯು ಈ ಕೆಳಗೆ ನಮೂದಿಸಿರು ಪ್ರಾಚೀನ ಸ್ಮಾರಕ ಹಾಗೂ ಪುರಾತನ ಸ್ಥಳ ಮತ್ತು ಅವಶೇಷಗಳ ಕಾನೂನಿನಿಂ ಮಾರ್ಪಟ್ಟಿರುವುದರಿಂದ ಆ ಕಾನೂನನ್ನು ಇಲ್ಲಿ ತಿಳಿಸಿಲ್ಲ. ಆಡಳಿತಕ್ರಮಗಳಲ್ಲಿ ಬದಲಾವ ಆದ ಪ್ರಯುಕ್ತ ೧೯೦೪ನೇ ಇಸ್ವಿ ಕಾನೂನಿನ ನಿಬಂಧನೆಗಳು ಪ್ರಕೃತದಲ್ಲಿ ಅಪ್ರಯೋಜ ವಾದರೂ, ಸರ್ಕಾರವು ಕಳೆದ ೫೫ ವರ್ಷಗಳಿಂದ ಸ್ಮಾರಕಗಳನ್ನು ಸುರಕ್ಷಿಸುವುದರಲ್ಲಿಯೂ ಮತ್ತು ಭೂಶೋಧನೆ ಮುಂತಾದ ಕಾರ್ಯಗಳನ್ನು ನಿಯಂತ್ರಿಸುವುದಕ್ಕೂ ತುಂಬಾ ಅನುಕೂ ವಾಗಿತ್ತೆಂಬುದನ್ನು ಮರೆಯಲಾಗದು.

೧೯೪೭ನೇ ಇಸ್ವಿಯ ಪ್ರಾಚೀನ ವಸ್ತುಗಳ ರಫ್ತು ಹತೋಟಿ ಕಾನೂನು ಪ್ರಕಾರ ಒಂದು ನೂರು ವರ್ಷಗಳಿಗಿಂತ ಹೆಚ್ಚು ಪುರಾತನ ವಸ್ತುಗಳನ್ನು ಸರ್ಕಾರದ ಅನುಮತಿಯಿಲ್ಲದೆ ಪ ದೇಶಗಳಿಗೆ ರಫ್ತುಮಾಡಿದರೆ ಶಿಕ್ಷೆ ವಿಧಿಸಲಾಗುವುದು ದೇಶದಲ್ಲಿನ ಪ್ರಾಚೀನ ವಸ್ತು ಸಂಪತ್ತು ಕ್ರಮೇಣ ಕ್ಷೀಣವಾಗದಂತೆ ನೋಡಿಕೊಳ್ಳುವುದೇ ಇದರ ಉದ್ದೇಶ. ಪ್ರಾಚೀನ ಸ್ಮಾರಕ ಪುರಾತತ್ವ ಸ್ಥಳ ಮತ್ತು ಅವಶೇಷಗಳ ಕಾನೂನು ೧೯೫೯ನೇ ಅಕ್ಟೋಬರ್ ೧೫ನೇ ತಾರೀಖು ಜಾರಿಗೆ ಬಂತು. ಹಿಂದೆ ಜಾರಿಯಲ್ಲಿದ್ದ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾನೂನಿನ ವಿಧಿಗಳನ್ನು ಈಗಿನ ಪರಿಸ್ಥಿತಿಗೆ ಅನುಕೂಲವಾಗಿ ಮಾರ್ಪಡಿಸಿರುವುದಲ್ಲದೆ, ಕೆಲವು ಸಹಾಯಕಾರಿ ವಿಧಿಗಳನ್ನೊಳಗೊಂಡಿವೆ. ಈ ಹೊಸ ಕಾನೂನಿನ ನಿಬಂಧನೆಗಳು ೧೯೫೧ರಲ್ಲಿ ರಾಷ್ಟ್ರೀಯ ಸ್ಮಾರಕಗಳೆಂದು ಸಾರಲ್ಪಟ್ಟ ಎಂದರೆ ಪ್ರಾಚೀನ ಸ್ಮಾರಕಗಳ ಸಂರಕ್ಷಣಾ ಕಾನೂನು ಪ್ರಕಾರ ಸಂರಕ್ಷಿಸಲ್ಪಟ್ಟ ಮತ್ತು ಮಾಜಿ ಸಂಸ್ಥಾನಗಳಲ್ಲಿದ್ದ ಕೆಲವು ಮುಖ್ಯ ಸ್ಮಾರಕಗಳಿಗೂ ಅನ್ವಯಿಸುತ್ತವೆ. ಇದಲ್ಲದೇ ಸರ್ಕಾರವು ಗೆಜೆಟ್‌ನಲ್ಲಿ ಪ್ರಕಟನೆಮಾಡಿ ಹೊಸದಾಗಿ ಸ್ಮಾರಕಗಳನ್ನೂ ಮತ್ತು ಪ್ರಾಚೀನ ಸ್ಥಳಗಳನ್ನೂ ಸುರಕ್ಷಿಸಲ್ಪಟ್ಟ ಸ್ಮಾರಕಗಳ ಪಟ್ಟಿಗೆ ಸೇರಿಸಬಹುದು. ಇಂತಹ ಎಲ್ಲಾ ಸ್ಮಾರಕಗಳಿಗೂ ಮತ್ತು ಸ್ಥಳಗಳಿಗೂ ಸಂರಕ್ಷಿತ ಸ್ಮಾರಕಗಳು ಅಥವಾ ಸ್ಥಳಗಳೆಂದು ಕರೆಯಲಾಗುತ್ತೆ.

ಸಂರಕ್ಷಿತ ಸ್ಮಾರಕಗಳು ಖಾಸಗಿ ಜನರಿಗೆ ಸೇರಿದ್ದರೆ ಅವುಗಳ ದುರಸ್ತು ಮೊದಲಾದ ವಿಷಯಗಳ ಸಂಬಂಧವಾಗಿ ಕೇಂದ್ರ ಸರ್ಕಾರವು ಮಾಲೀಕರೊಡನೆ ಒಪ್ಪಂದವನ್ನು ಮಾಡಿಕೊಳ್ಳಬಹುದು. ಮಾಲೀಕನ ಒಪ್ಪಂದಕ್ಕೆ ಬರಲು ನಿರಾಕರಿಸಿದ್ದಲ್ಲಿ ಅಥವಾ ಒಪ್ಪಂದಕ್ಕೆ ಬರದಿದ್ದಲ್ಲಿ ಸರ್ಕಾರವು ಸ್ಮಾರಕದ ರಕ್ಷಣೆಗಾಗಿ ಕೆಲವು ಅಧಿಕಾರಗಳನ್ನು ವಹಿಸಿಕೊಂಡು ಅವಶ್ಯಕ ಕಂಡಲ್ಲಿ ಸ್ಮಾರಕದಮೇಲೆ ಮಾಲೀಕನಿಗಿರುವ ಹಕ್ಕುಬಾಧ್ಯತೆಗಳನ್ನು ಸ್ವಲ್ಪ ಮಟ್ಟಿಗೆ ನಿರ್ಬಂಧಿಸಬಹುದು

ಮಾಲೀಕನು ಸ್ಮಾರಕದ ಹಿತಕ್ಕೆ ಧಕ್ಕೆತರುವ ಕಾರ್ಯಗಳನ್ನಾವುದನ್ನಾದರೂ ಮಾಡುವಂತೆ ತೋರಿಬಂದಲ್ಲಿ ಅಥವಾ ಸ್ಮಾರಕಕ್ಕೆ ಸೇರಿದ ಜಾಗದಲ್ಲಿಯಾಗಲೀ ಅದರ ಹತ್ತಿರವಾಗಲೀ ಕಟ್ಟಡವನ್ನು ಕಟ್ಟುವುದು ತಿಳಿದರೆ ಮಾಲೀಕನಿಗೆ ಡೈರೆಕ್ಟರ್ ಜನರಲ್‌ರು ನಿರ್ಬಂಧಾಜ್ಞೆಯನ್ನು ವಿಧಿಸಬಹುದು.

ಪ್ರಾಚೀನ ಸ್ಮಾರಕವು ಧಾರ್ಮಿಕ ಕೆಲಸಕ್ಕಾಗಿ ಅಥವಾ ಪೂಜೆಗಾಗಿ ಉಪಯೋಗಿಸಲ್ಪಡುತ್ತಿದ್ದರೆ ಸರ್ಕಾರದ ಸಂರಕ್ಷಣೆಗೆ ಒಳಗಾದಮೇಲೂ ಅದೇರೀತಿ ಉಪಯೋಗಿಸಬಹುದು.

ಸಂರಕ್ಷಿಸಲ್ಪಟ್ಟ ಸ್ಥಳಗಳ ವಿಷಯ ಈಗ ತಿಳಿಸೋಣ. ಸಂರಕ್ಷಿತ ಸ್ಥಳದಲ್ಲಿ ಯಾರೂ ಖನಿಜಗಳಿಗಾಗಲೀ ಅಥವಾ ಬೇರೆ ಯಾವುದೇ ಉದ್ದೇಶದಿಂದಾಗಲೀ ಅಗೆಯಕೂಡದು ಮತ್ತು ಸುರಂಗ ಹಾಕಿ ಮದ್ದು ಹೊಡೆಯಕೂಡದು. ಆದರೆ ಸಾಧಾರಣವಾಗಿ ಸಾಗುವಳಿ ಮಾಡಬಹುದು. ಸಂರಕ್ಷಿತ ಸ್ಥಳದಲ್ಲಿ ಸರ್ಕಾರದ ಅಪ್ಪಣೆಯಿಲ್ಲದೆ ಯಾವ ಕಟ್ಟಡವನ್ನೂ ಕಟ್ಟ

ಾಡದು. ಹಾಗೆ ಕಟ್ಟಿದ್ದೇ ಆದರೆ ಕಟ್ಟಿದವರ ಖರ್ಚಿನಿಂದಲೇ ಸರ್ಕಾರವು ಕಿತ್ತುಹಾಕಿಸ
ಹುದು.

ಕೇಂದ್ರ ಸರ್ಕಾರದ ಪುರಾತತ್ವ ವಿಭಾಗದ ಅಧಿಕಾರಿಯು ಹೊರತು ಬೇರೆ ಯಾರೂ ೈರೆಕ್ಟರ್ ಜನರಲ್‌ರ ಅಪ್ಪಣೆಯಿಲ್ಲದೆ ಸಂರಕ್ಷಿತ ಸ್ಥಳದಲ್ಲಿ ಭೂಶೋಧನೆ ಮಾಡಬಾರದು. ಈ ಭಾಗದ ಅಧಿಕಾರಿಯು ಅರಕ್ಷಿತ ಸ್ಥಳದಲ್ಲಿ ಕೂಡ ಭೂಶೋಧನೆ ಮಾಡಬಹುದು. ಖಾಸಗಿ ಜೆಗಳಿಗೆ ಸೇರಿದ ಸ್ಥಳವು ಸಂರಕ್ಷಿತವಾಗಿರಲೀ ಅಥವಾ ಆಗದಿರಲೀ, ಆ ಸ್ಥಳದಿಂದ ೂಶೋಧಿತ ಪ್ರಾಚೀನ ವಸ್ತುಗಳನ್ನು ಸರ್ಕಾರವು ಮಾಲೀಕನಿಂದ ಕೊಳ್ಳಬಹುದು.

ಪ್ರಾಚೀನ ವಸ್ತುಗಳು ನಾಶಪಡಿಸಲ್ಪಡುವ ಅಥವಾ ಕ್ಷೀಣದೆಶೆಗೆ ತರಲ್ಪಡುವ ಅಥವಾ ಳಾಂತರಿಸಲ್ಪಡುವ ಸಂಭವವಿದೆಯೆಂದು ಸರ್ಕಾರಕ್ಕೆ ಅನುಮಾನವಾದರೆ ಅಥವಾ ಆ ವಸ್ತು ು ಸಾರ್ವಜನಿಕ ಸ್ಥಳದಲ್ಲಿರತಕ್ಕದ್ದೆಂದು ಭಾವಿಸಿದರೆ ಸರ್ಕಾರವು ಅವುಗಳನ್ನು ಕೊಳ್ಳ ಹುದು ಅಥವಾ ಸ್ಥಳಪಲ್ಲಟವಾಗಕೂಡದೆಂದು ಆಜ್ಞಾಪಿಸಬಹುದು.

ಈ ಕಾನೂನಿಗೆ ವಿರೋಧವಾಗಿ ನಡೆದರೆ ಮೂರು ತಿಂಗಳ ಸಜಾ ಇಲ್ಲವೇ ೫,೦೦೦ ೂ.ಗಳ ದಂಡ ಅಥವಾ ಎರಡೂ ಶಿಕ್ಷೆಗಳನ್ನು ಒಟ್ಟಿಗೆ ವಿಧಿಸಬಹುದು. ಈ ಕಾನೂನಿನ ್ರಕಾರ ಸರ್ಕಾರವು ಹೊರಡಿಸಿದ ನಿಬಂಧನೆಗಳು ಕೂಡ ೧೯೫೯ನೇ ಅಕ್ಟೋಬರ್ ೧೫ನೇ ನಾಂಕ ಜಾರಿಗೆ ಬಂದ ಪ್ರಯುಕ್ತವಾಗಿ ಅವುಗಳನ್ನು ಕೆಳಗೆ ಸೂಕ್ಷ್ಮವಾಗಿ ತಿಳಿಸಲಾಗಿದೆ.

ಸಾಮಾನ್ಯವಾಗಿ ಸಂರಕ್ಷಿತ ಸ್ಮಾರಕಗಳು ಸೂರ್ಯೋದಯದಿಂದ ಸೂರ್ಯಾಸ್ತಮದ ರೆವಿಗೂ ತೆರೆಯಲ್ಪಟ್ಟಿರುತ್ತವೆ. ಪುಷ್ಪವನಗಳುಳ್ಳ ಕೆಲವು ಸ್ಮಾರಕಗಳು ರಾತ್ರೆ ಹತ್ತು ಘಂಟೆ ೆಗೂ ತೆರೆಯಿರುತ್ತವೆ. ಖಾಸಗಿ ಸಂರಕ್ಷಿತ ಸ್ಮಾರಕಗಳು ತೆರೆಯಲ್ಪಟ್ಟಿರುವ ವೇಳೆಯು ್ಗಗಳ ಮಾಲೀಕರೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ನಿರ್ಧರಿಸಲ್ಪಟ್ಟಿರುತ್ತದೆ.

ಕೆಲವು ಸ್ಮಾರಕಗಳ ಹೊರತು ಬಾಕಿ ಎಲ್ಲಾ ಕಡೆಯೂ ಪ್ರವೇಶವು ಉಚಿತ. ಲವು ಸ್ಮಾರಕಗಳಿಗೆ ಮಾತ್ರ ಪ್ರವೇಶಧನ ೨೦ ನಯಾಪೈಸೆ. ೧೫ ವಯಸ್ಸಿನ ಒಳಗಿರುವ ುಕ್ಕಳಿಗೆ ಎಲ್ಲೂ ಪ್ರವೇಶ ಧನ ತೆಗೆದುಕೊಳ್ಳುವುದಿಲ್ಲ. ಈ ಸ್ಮಾರಕಗಳು ಬೆಳಿಗ್ಗೆ ರಿಂದ ಸಾಯಂಕಾಲ ೫–೩೦ರ ಅಥವಾ ಸೂರ್ಯಾಸ್ತಮದ ವರೆಗೆ ತೆರೆಯಲ್ಪಟ್ಟಿರುತ್ತವೆ.

ಸ್ಮಾರಕಗಳಲ್ಲಿ ಸಮ್ಮತಿಸಿದ ಧಾರ್ಮಿಕ ಕಾರ್ಯಕಲಾಪಗಳ ಹೊರತು ಬೇರೆ ಯಾವ ಧವಾದ ಸಭೆಗಳಾಗಲೀ, ಸಂತೋಷಕೂಟಗಳಾಗಲೀ ಸೇರಕೂಡದು. ಅಪ್ಪಣೆಯಿಲ್ಲದೆ ಾಹಿರಾತುಮಾಡುವುದು, ಸರಕುಗಳನ್ನು ಮಾರುವುದೂ, ಅಥವಾ ಪರವಾನಿಗೆ ಇಲ್ಲದೆ ಮಾರ್ಗ ರ್ಶಕರಾಗುವುದೂ ನಿಷೇಧಿಸಿದೆ.

ಸಾಧಾರಣವಾಗಿ ಸ್ಮಾರಕಗಳ ನಕ್ಷೆ ಮತ್ತು ಛಾಯ ಚಿತ್ರಗಳನ್ನು ತೆಗೆಯುವುದಕ್ಕೆ ಾವ ಅಭ್ಯಂತರವೂ ಇಲ್ಲ. ಆದರೆ ಪ್ರೇಕ್ಷಕರಿಗೆ ಅನಾನುಕೂಲವಾಗಬಹುದಾದಂಥ ಕ್ಯಾಮರಾ ್ಟ್ಯಾಂಡ್‌ಗಳೇ ಮೊದಲಾದ ಸಾಮಗ್ರಿಗಳನ್ನು ಉಪಯೋಗಿಸಕೂಡದು. ಸ್ಮಾರಕಗಳ ಚಲ ಿತ್ರಗಳನ್ನು ತಯಾರಿಸಲು ಅಪ್ಪಣೆ ಅತ್ಯವಶ್ಯಕ.

ಸ್ಮಾರಕದ ಸಮೀಪದಲ್ಲಿ ಖನಿಜಕ್ಕಾಗಿ ಅಗೆಯುವುದಾಗಲೀ ಅಥವಾ ಕಟ್ಟಡಗಳನ್ನು ಕಟ್ಟು ುದಾಗಲೀ ನಿಲ್ಲಿಸಬೇಕು ಅಥವಾ ಕ್ರಮಪಡಿಸಬೇಕೆಂದು ಸರ್ಕಾರವು ಅಭಿಪ್ರಾಯಪಟ್ಟರೆ ್ಮಾರಕದ ಸುತ್ತಮುತ್ತಲಿರುವ ಜಾಗವನ್ನು ಪ್ರತಿಬಂಧಿಸಿದ (Prohibited) ಅಥವಾ ಕ್ರಮ ೊಳಿಸಿದ (Regulated) ಸ್ಥಳವೆಂದು ಸಾರಬಹುದು. ಪ್ರತಿಬಂಧಿಸಿದ ಸ್ಥಳದಲ್ಲಿ ಖನಿಜ

ಕ್ಕಾಗಿ ಅಗೆಯುವುದು ಮತ್ತು ಕಟ್ಟಡಗಳನ್ನು ನಿರ್ಮಿಸುವುದು ನಿಷೇಧಿಸಿದೆ. ಆದರೆ ಕ್ರಮ ಪಡಿಸಿದ ಸ್ಥಳಗಳಲ್ಲಿ ಅಪ್ಪಣೆ ಪಡೆದು ಈ ಕಾರ್ಯಗಳನ್ನು ಮಾಡಬಹುದು. ಅಪ್ಪಣೆ ಇಲ್ಲ ಕಟ್ಟಿದ ಕಟ್ಟಡಗಳನ್ನು ಸರ್ಕಾರವು ತೆಗೆಸಿಹಾಕಬಹುದು. ಸ್ಮಾರಕಗಳ ಭದ್ರತೆ ಮತ್ತು ಸೌಂದರ್ಯ ರಕ್ಷಣೆ ಈ ನಿಬಂಧನೆಗಳ ಮುಖ್ಯೋದ್ದೇಶ. ಈ ನಿಬಂಧನೆಯಿಂದ ನಷ್ಟಕ ಗುರಿಯಾದವರಿಗೆ ಸೂಕ್ತ ಪರಿಹಾರ ದ್ರವ್ಯವನ್ನು ಕೊಡಲಾಗುತ್ತೆ.

ನಿಬಂಧನೆಗಳಿಗೆ ವಿರುದ್ಧವಾಗಿ ನಡೆದವರಿಗೆ ವಿಧಿಸಬಹುದಾದ ದಂಡವನ್ನು ಕೂ ಕಾನೂನು ತಿಳಿಸುತ್ತದೆ.



೧. ಕೈಗೊಡಲ, ಶೀಳುಗತ್ತಿ ಮೊದಲಾದ ಪ್ರಾಚ್ಯ ಶಿಲಾಯುಧಗಳು.




೨. ಸೂಕ್ಷ್ಮಶಿಲಾಯುಧಗಳು, ಬೀರ್‌ಭನ್ ಪುರ (ಪಶ್ಚಿಮ ಬಂಗಾಳ).

# ಭಾರತದ ಆದಿ ಸಂಸ್ಕೃತಿಗಳು

## ೧

ಮಾನವನು ಪ್ರಪಂಚದ ಬೇರೆ ಭಾಗಗಳಲ್ಲಿ ಕಾಣಿಸಿಕೊಂಡಂತೆ ಭಾರತದಲ್ಲಿಯೂ ಕೂಡ ಹು ಪ್ರಾಚೀನದಲ್ಲಿ, ಎಂದರೆ, ಒಂದು ಲಕ್ಷ ವರ್ಷಗಳಿಗಿಂತ ಮುಂಚೆ ಕಾಣಿಸಿಕೊಂಡನು. ಆದ್ಯ ಾನವನ ಅಸ್ಥಿಭೂತವಾದ ಅವಶೇಷಗಳ ಕುರುಹು ಇದುವರೆವಿಗೂ ಭಾರತದಲ್ಲಿ ಹೊರ ೂಮ್ಮಿಲ್ಲ. ಅಪರಿಷ್ಕೃತವಾದ ಶಿಲಾಯುಧಗಳೇ ಆ ಮಾನವನ ಗುರುತು.

ಪ್ರಾಚ್ಯ ಶಿಲಾಯುಗದ ಮನುಷ್ಯನು ಈಗಿನ ವಾಯುಗುಣಕ್ಕಿಂತ ಅತಿ ಹೆಚ್ಚು ಭಯಂಕರ ಾದ ಕಾಲದಲ್ಲಿ ವಾಸಿಸುತ್ತಿದ್ದನು. ಎತ್ತರವಾದ ಸ್ಥಳಗಳಲ್ಲಿ ಹೆಚ್ಚು ಅವಧಿಗಳವರೆಗೆ ತೀಕ್ಷ್ಣವಾದ ಳೆಯೂ ಮತ್ತು ಹಿಮಮಳೆಯೂ ಆಗುತ್ತಿತ್ತು. ಅನಂತರ ಅಷ್ಟೇ ತೀಕ್ಷ್ಣವಾದ ಅನಾವೃಷ್ಟಿ ುತು ಸೆಕೆ ಕಾಲಗಳು ಬಂದವು. ಸುತ್ತಮುತ್ತಲಿನ ಮೈದಾನಗಳಲ್ಲಿಯೂ ಕೂಡ ಕ್ರಮವಾಗಿ ತಿವೃಷ್ಟಿ ಮತ್ತು ಅನಾವೃಷ್ಟಿಯಾಗುತ್ತಿತ್ತು. ಈ ಕಾರಣಗಳಿಂದ ಭೂಮಿಯ ಸ್ವರೂಪವೇ ದಲಾಯಿಸಿತು. ನದಿಗಳ ಪ್ರಾಚೀನ ಹಂತಗಳಮೇಲೂ, ಶುಷ್ಕಪಾತ್ರಗಳಲ್ಲಿಯೂ, ಕಲ್ಲು ಂಡೆ ಮತ್ತು ಗರಸು ಕಲ್ಲುಗಳಮೇಲೂ, ನದಿ ದಂಡೆಗಳಲ್ಲಿಯೂ ಹಾಗೂ ಗುಹೆಗಳಲ್ಲಿ ಪ್ರಾಚ್ಯ ಲಾಯುಧಗಳು ಸಿಕ್ಕುತ್ತವೆ. ಭಾರತದಲ್ಲಿ ಮಾತ್ರ ಪ್ರಾಚ್ಯ ಶಿಲಾಯುಧಗಳು ಸಿಕ್ಕುವ ಗುಹೆ ಳು ಇನ್ನೂ ಕಂಡುಬಂದಿಲ್ಲ.

ಭಾರತದಲ್ಲಿ ಮೊಟ್ಟ ಮೊದಲನೆ ಪ್ರಾಚ್ಯ ಶಿಲಾಯುಧವು ೧೮೬೩ರಲ್ಲಿ ಮದ್ರಾಸ್ ಹತ್ತಿರ ರುವ ಪಲ್ಲವರಂ ಎಂಬ ಸ್ಥಳದಲ್ಲಿ ಭಾರತ ಭೂಗರ್ಭ ಶಾಸ್ತ್ರವಿಭಾಗದ ಅಧಿಕಾರಿ ರಾಬರ್ಟ ್ರೂಸ್ ಫೂಟ್‌ರವರಿಂದ ಕಂಡುಹಿಡಿಯಲ್ಪಟ್ಟಿತು. ಅಲ್ಲಿಂದ ಸುಮಾರು ೭೦ ವರ್ಷಗಳವರೆಗೆ ಂಗಾ–ಯಮುನಾ ನದಿಗಳ ಪಾತ್ರ ಹೊರತು ಭಾರತದ ಮಿಕ್ಕ ಎಲ್ಲಾ ಭಾಗಗಳಲ್ಲಿಯೂ ಸಂಖ್ಯಾತವಾಗಿ ಪ್ರಾಚ್ಯ ಶಿಲಾಯುಧಗಳು ಸಿಕ್ಕಿರುತ್ತವೆ. ಆದರೆ ಅವುಗಳ ಭೂಗರ್ಭ ಂಬಂಧವನ್ನು ತಿಳಿಯಲು ಯಾವ ಪ್ರಯತ್ನವನ್ನೂ ಮಾಡಿರಲಿಲ್ಲ.

ಭೂಗರ್ಭ ಶಾಸ್ತ್ರಜ್ಞರು ಕಾಶ್ಮೀರದಲ್ಲಿ ಹಿಮಪ್ರವಾಹಗಳ ಮತ್ತು ಅಂತರ ಹಿಮಪ್ರವಾಹ ಳ ಅವಶೇಷಗಳನ್ನು ಕಂಡುಹಿಡಿದಿದ್ದಾರೆ. ಇವುಗಳು ಯೂರೋಪಿನ ಹಿಮಯುಗದ ಮಹತ್ವ ಾಲಗಳಿಗೆ ಸರಿಸಮಾನವೆಂದು ಊಹಿಸಲಾಗಿದೆ. ಆದರೆ ಯೂರೋಪಿನಲ್ಲಿರುವಂತೆ ಈ ಮಪ್ರವಾಹದ ಅವಶೇಷಗಳಲ್ಲಿ ಪ್ರಾಚ್ಯ ಶಿಲಾಯುಧಗಳು ಕಾಶ್ಮೀರದಲ್ಲಿ ಕಂಡುಬಂದಿಲ್ಲ. . ಟೆರಾರವರ ನಿಯೋಗವು ರಾವಲ್ಪಿಂಡಿ ಜಿಲ್ಲೆಯಲ್ಲಿರುವ ಸಿಂಧು ನದಿಯ ಉಪ ದಿಯಾದ ಸೋಹಾನ್ ನದಿಯ ಹಂತಗಳಿಗೂ ಮತ್ತು ಕಾಶ್ಮೀರದ ಹಿಮಪ್ರವಾಹ ಹಾಗೂ ಂತರ ಹಿಮಪ್ರವಾಹ ಕಾಲಗಳಿಗೂ ಇರುವ ಪರಸ್ಪರ ಸಂಬಂಧವನ್ನು ತೋರಿಸಿಕೊಟ್ಟಿದೆ. ಈ ಂತಗಳಮೇಲೆ ಪ್ರಾಚ್ಯ ಶಿಲಾಯುಧಗಳು ಸಿಕ್ಕಿವೆ. ಸೊಹಾನ್ ಆಯುಧಗಳು ಒಂದೇ ಾರ್ಶ್ವದ ಮೇಲ್ಭಾಗದಲ್ಲಿ ಚಕ್ಕೆ ಎಬ್ಬಿಸಿರುವುದರಿಂದ ಹರಿತವಾದ ತುದಿಯನ್ನು ಹೊಂದಿರುತ್ತವೆ. ಈ ಆಯುಧಗಳಿಗೆ ಏಕಮುಖಿ (Unifacial) ಆಯುಧಗಳೆಂದು ಹೆಸರು. ಇವುಗಳು ಬರ್ಮ, ಾವಾ ಮತ್ತು ಚೀನಾ ಮೊದಲಾದ ಪೌರ್ವಾತ್ಯ ದೇಶಗಳಿಂದ ಬಂದಿರಬಹುದೆಂದು ಕೆಲವು ದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಮಾದರಿ ಆಯುಧಗಳು ಇತ್ತೀಚೆಗೆ ಕಾಂಗ್ರಾ ಲ್ಲೆಯಲ್ಲಿ ಬಿಯಾಸ್ ನದಿಯ ಉಪನದಿಯಾದ ಬೈನಗಂಗೆ ನದಿಯ ಬಯಲಿನಲ್ಲಿ ಸಿಕ್ಕಿವೆ.

ಮದ್ರಾಸ್ ಹತ್ತಿರ ಸಿಕ್ಕಿರುವ ಆಯುಧಗಳು ಬೇರೆ ಮಾದರಿಯವು. ಉಂಡೆಗ
ಅಥವಾ ಬೆನಗಲ್ಲಿನ ಎರಡು ಪಾರ್ಶ್ವಗಳಲ್ಲಿಯೂ ಚಕ್ಕೆ ಎಬ್ಬಿಸಿ, ಕೈಗೊಡಲಿ (handax
ಶೀಳುಗತ್ತಿ (cleaver), ಅಂಡಾಕೃತಿ (ovate) ಆಯುಧ ಮೊದಲಾದುವು ತಯಾ
ಲ್ಪಟ್ಟಿವೆ. ಈ ಮಾದರಿ ಆಯುಧಗಳು ಸೊಹಾರ್ ಪ್ರದೇಶದಲ್ಲಿ ಕೂಡ ಅತ್ಯಲ್ಪ ಸಂಖ್ಯೆಯ
ಸಿಕ್ಕಿವೆ. ತಯಾರಿಕೆ ವೈಶಿಷ್ಟ್ಯದಲ್ಲಿ ಇವು ಯೂರೋಪ್ ಮತ್ತು ಆಫ್ರಿಕಾ ಖಂಡದ "ಅ
ವಿಲಿಯನ್" ಮತ್ತು "ಅಶ್ಯೂಲಿಯನ್" ಆಯುಧಗಳನ್ನು ಹೋಲುತ್ತವೆ.

ಆದ್ದರಿಂದ ಭಾರತ ಪ್ರಾಚ್ಯ ಶಿಲಾಯುಗದ ಆಯುಧಗಳನ್ನು ಸೋಹಾನ ಏಕಮು
ಮತ್ತು ಮದ್ರಾಸಿನ ದ್ವಿಮುಖಿ (Bifacial) ಆಯುಧಗಳೆಂದು ಎರಡು ಪಂಗಡವಾ
ವಿಂಗಡಿಸಬಹುದು. ಏಕಮುಖಿ ಆಯುಧಗಳು ಹಿಮಾಲಯ ಪರ್ವತದ ತಪ್ಪಲುಗಳಲ್ಲಿ ಮಾ
ಮತ್ತು ದ್ವಿಮುಖಿ ಆಯುಧಗಳು ಇತರೆ ಜಾಗಗಳಲ್ಲಿ ಮಾತ್ರ ಹೆಚ್ಚಾಗಿ ಸಿಕ್ಕುತ್ತವೆಂದು ನಿ
ಪಿಸಬಹುದು. ಇವೆರಡು ಪಂಗಡಗಳು ಮಿಲನವಾಗಿ ಸಿಕ್ಕುವುದು ಅತಿ ವಿರಳ.

ಇತ್ತೀಚೆಗೆ ನಮ್ಮ ದೇಶದಲ್ಲಿ ಪ್ರಾಚ್ಯ ಶಿಲಾಯುಗದ ಆಯುಧಾನ್ವೇಷಣ ಮತ
ಸಂಶೋಧನೆಯು ಹೆಚ್ಚಾಗಿ ನಡೆಯುತ್ತಿರುವುದರಿಂದ ನೂರಾರು ಶಸ್ತ್ರಭರಿತ ಪ್ರಕ್ಷೇಪಗಳ
ಪಂಜಾಬ್, ರಾಜಸ್ಥಾನ, ಗುಜರಾತ್, ಮಧ್ಯ ಇಂಡಿಯಾ, ಡೆಕ್ಕನ್ ಮತ್ತು ದಕ್ಷಿಣ ಭಾ
ನದಿಗಳ ಬದಿಗಳಲ್ಲಿಯೂ ಮತ್ತು ಪ್ರಾಚೀನ ನದಿ ಹಂತಗಳಲ್ಲಿಯೂ ಕಂಡುಹಿಡಿಯಲ್ಪಟ್ಟಿವೆ.

೨

ಮಧ್ಯ ಇಂಡಿಯಾ ಮತ್ತು ಡೆಕ್ಕನ್ನಿನಲ್ಲಿ ಕೈಗೊಡಲಿ ಮತ್ತು ಶೀಲುಗೊಡಲಿ ಸಂ
ದಾಯಕ್ಕೆ ಸೇರಿ, ಪ್ರಥಮಾವಳಿಯೆಂದು (Series I) ಕರೆಯಲ್ಪಡುವ ಪ್ರಾಚ್ಯ ಶಿಲಾಯು
ಗಳಾದನಂತರ ಇವುಗಳಿಗೆ ಗಾತ್ರದಲ್ಲಿ ಚಿಕ್ಕದಾಗಿದ್ದು ಹೆಚ್ಚು ಪ್ರಶಸ್ತವಾದ ಕಲ್ಲುಗಳಿಂ
ತಯಾರಿಸಲ್ಪಟ್ಟು, 'ದ್ವಿತೀಯಾವಳಿ' (Series II) ಯೆಂದು ಕರೆಯಲ್ಪಡುವ ಬೇರೆ ಒಂ
ಸಂಪ್ರದಾಯಕ್ಕೆ ಸೇರಿದ ಆಯುಧಗಳು ಉಪಯೋಗಕ್ಕೆ ಬಂದವು. ದ್ವಿತೀಯಾವಳಿಯ
ಅಲಗು (blade), ಸಲಕಿ (Seraper) ರಂಪಿಗೆ (awl) ಕೆತ್ತುವಚಾಣ, (engraver) ಇ
ಮೊದಲಾದ ಹೊಸ ಆಕಾರದ ಆಯುಧಗಳಿವೆ. ನರ್ಮದಾ ದಡದ ಮೇಲಿರುವ ಮಹೇಶ್ವ
ಎಂಬಲ್ಲಿಯೂ ಮತ್ತು ಗೋದಾವರಿಯ ಉಪನದಿಯಾದ ಪ್ರವರ ದಡದಮೇಲೂ 'ದ್ವಿತೀಯ
ವಳಿ' ಆಯುಧಗಳು 'ಪ್ರಥಮಾವಳಿ' ಆಯುಧಗಳಿಗಿಂತ ಎತ್ತರವಾಗಿರುವ ಜಾಗದಲ್ಲಿ ಬೇ
ತರಹೆಯ ಪ್ರಕ್ಷೇಪದಲ್ಲಿ ಸಿಕ್ಕಿರುವುದರಿಂದ 'ದ್ವಿತೀಯಾವಳಿ'ಯು 'ಪ್ರಥಮಾವಳಿ' ಗಿಂತ ಕ
ಕಾಲದವಾದನಂತರ ಉಪಯೋಗಕ್ಕೆ ಬಂತೆಂದು ನಿಸ್ಸಂಶಯವಾದ ಸ್ತರಗಳ ಆಧಾರದಮೇ
ಹೇಳಬಹುದು. ಆದ್ದರಿಂದ ಪ್ರಥಮಾವಳಿ'ಯ ಆಯುಧಗಳಿಗೂ ಮತ್ತು 'ದ್ವಿತೀಯಾವಳಿ'ಯ
ಆಯುಧಗಳಿಗೂ ವಂಶಸಂಪರ್ಕವಿಲ್ಲ. 'ದ್ವಿತೀಯಾವಳಿ' ಆಯುಧಗಳ ಗಾತ್ರವನ್ನು ಲಕ್ಷಿಸ
ಆಕಾರವನ್ನು ಮಾತ್ರ ಪರಿಶೀಲಿಸಿದರೆ ಇವುಗಳು ಸೂಕ್ಷ್ಮ ಶಿಲಾಯುಧಗಳ ಮೂಲಾಧಾರವೆಂ
ಗಣಿಸಬಹುದು. ಈಗ ಸೂಕ್ಷ್ಮ ಶಿಲಾಯುಧಗಳ ವಿಚಾರ ತಿಳಿಯೋಣ.



೩. ದ್ವಿತೀಯಾವಳಿಯ ಶಿಲಾಯುಧಗಳು. ಅಮ್ಲೋತ್ರ (ತಪತೀ ನದಿ)



೪. ನುಣುಪಾದ ಕಲ್ಲುಗೊಡಲಿಗಳು, ಬ್ರಹ್ಮಗಿರಿ (ಮೈಸೂರು ಸಂಸ್ಥಾನ).

೩

ಯೂರೋಪ್, ಆಫ್ರಿಕಾ ಮತ್ತು ಪಶ್ಚಿಮ ಏಷ್ಯಾದಲ್ಲಿ ಸೂಕ್ಷ್ಮ ಶಿಲಾಯುಧಗಳು, ಪ್ರಾಚ್ಯ ಶಿಲಾಯುಗಕ್ಕೂ ಮತ್ತು ನೂತನ ಶಿಲಾಯುಗಕ್ಕೂ ಮಧ್ಯಂತರದಲ್ಲಿರುವ ಮಧ್ಯ ಶಿಲಾ ಯುಗಕ್ಕೆ ಸೇರಿದವುಗಳೆಂದು ಸೂಚಿಸಲಾಗಿದೆ. ಭಾರತದಲ್ಲಿ ಮಧ್ಯಶಿಲಾಯುಗವಿತ್ತೆಂದು ನಿರ್ಧಾರವಾಗಿ ಹೇಳಲು ಸಾಕಷ್ಟು ಆಧಾರವಿಲ್ಲ. ದೊರಕುವ ಸ್ಥಳ ಮತ್ತು ಸಂದರ್ಭಾನು ಸಾರವಾಗಿ ಭಾರತದ ಸೂಕ್ಷ್ಮ ಶಿಲಾಯುಧಗಳನ್ನು ಮೂರು ಪಂಗಡಗಳಾಗಿ ವಿಂಗಡಿಸ ಬಹುದು. ಅತ್ಯಂತ ದಕ್ಷಿಣದಲ್ಲಿ ಮದ್ರಾಸ್ ಸಮೀಪದಲ್ಲಿರುವ 'ತೇರಿ' ಯ ಕೆಂಪು ಮರಳಿನ ದಿಣ್ಣೆಗಳಲ್ಲಿಯೂ ಮತ್ತು ಬಂಗಾಳದ ಬರ್ದ್ವಾನ್ ಜಿಲ್ಲೆಯ 'ಬೀರ್‌ಭಾನ್‌ಪುರ'ದಲ್ಲಿಯೂ ಸಿಕ್ಕುವ ಸೂಕ್ಷ್ಮ ಶಿಲಾಯುಧಗಳು ಅತ್ಯಂತ ಪ್ರಾಚೀನವಾದುವೆಂದು ಹೇಳಲಾಗಿದೆ. ಅವುಗಳು ವಕ್ರಾಕಾರವಾಗಿವೆ. ಇವುಗಳೊಂದಿಗೆ ಬೇರೆ ತರಹದ ಯಾವ ಸಾಂಸ್ಕೃತಿಕ ಅವಶೇಷಗಳೂ ಕೂಡಿಲ್ಲ. ಎರಡನೇ ಗುಂಪಿಗೆ ಸೇರಿದ ಸೂಕ್ಷ್ಮ ಶಿಲಾಯುಧಗಳು ನಾಗಾರ್ಜುನ ಕೊಂಡ ಮತ್ತು ಗುಜರಾತ್‌ನಲ್ಲಿರುವ ಲಾಂಘ್‌ನಾಜ್‌ನಲ್ಲಿ ಸಿಕ್ಕಿರುತ್ತವೆ. ಆ ಕಾಲಕ್ಕೆ ಮಣ್ಣಿನ ಪಾತ್ರೆ ಗಳು ಉಪಯೋಗಕ್ಕೆ ಬಂದಿದ್ದವು. ಮೂರನೇ ಗುಂಪು ಪೂರ್ಣ ಪ್ರಗತಿ ಹೊಂದಿದ ತಾಮ್ರ ಶಿಲಾಯುಗಕ್ಕೆ ಸೇರಿದೆ.

ನೂತನ ಶಿಲಾಯುಧಗಳು, ಅದರಲ್ಲಿಯೂ ಮುಖ್ಯವಾಗಿ ನುಣುಪಾದ ಕಲ್ಲು ಕೊಡಲಿಗಳು, ಮಧ್ಯ ಇಂಡಿಯಾ, ಡೆಕ್ಕನ್ ಮತ್ತು ದಕ್ಷಿಣ ಭಾರತದಲ್ಲಿ ಅಸಂಖ್ಯಾತವಾಗಿ ಸಿಕ್ಕಿವೆ. ಇವು ಭಾರತದ ಈಶಾನ್ಯ ಭಾಗದಲ್ಲಿಯೂ ದೊರಕುತ್ತವೆ. ಆದರೆ ಸಾಮಾನ್ಯವಾಗಿ ಅವುಗಳ ಆಕೃತಿಯಲ್ಲಿ ಸ್ವಲ್ಪಮಟ್ಟಿಗೆ ವ್ಯತ್ಯಾಸವಿದೆ. ಮೊದಲು ತಿಳಿಸಿದ ಭಾಗಗಳಲ್ಲಿ ನೂತನ ಶಿಲಾ ಯುಧಗಳ ಅಡ್ಡ ಛೇದ ದುಂಡಾಗಿ ಅಥವಾ ಅಂಡಾಕಾರವಾಗಿರುತ್ತದೆ. ಆದರೆ ಈಶಾನ್ಯ ಭಾರತದಲ್ಲಿ ಅವುಗಳ ಅಡ್ಡ ಛೇದವು ದೀರ್ಘ ಚತುರಸ್ರವಾಗಿಯೂ ಮತ್ತು ಕೆಲವು ಆಯುಧ ಗಳಿಗೆ ಭುಜವೂ ಇರುತ್ತದೆ. ಇವುಗಳು ಪ್ರಾಯಶಃ ಪೂರ್ವ ದೇಶಗಳಿಂದ ಬಂದಿರಬಹುದು. ಡೆಕ್ಕನ್ನಿನಲ್ಲಿ ತಾಮ್ರದ ಉಪಯೋಗಕ್ಕಿಂತ ಮುಂಚಿನ ನೂತನ ಶಿಲಾಯುಗದ ಕೆಲವು ವಸತಿ ಗಳನ್ನು ಅಗೆಯಲಾಗಿದೆ. ಈ ಅಲ್ಪಪ್ರಮಾಣದಲ್ಲಿ ಸಿಕ್ಕಿರುವ ಅವಶೇಷಗಳಿಂದ ಹೊರಬೀಳುವು ದೇನೆಂದರೆ ನೂತನ ಶಿಲಾಯುಗದಲ್ಲಿ ಒರಟಾದ ಕಪ್ಪು ಅಥವಾ ಕಂದು ಮಣ್ಣಿನ ಪಾತ್ರೆಗಳೂ (ಕೋರ್ಸ್ ಗ್ರೇ ವೇರ್) ಉಪಯೋಗದಲ್ಲಿದ್ದವೆಂದು ಹೇಳಬಹುದು. ನೂತನ ಶಿಲಾಯುಗದ ಅವಶೇಷಗಳೊಂದಿಗೆ ಸೂಕ್ಷ್ಮ ಶಿಲಾಯುಧಗಳೂ ಕೂಡ ಅನೇಕ ವೇಳೆ ಸಿಕ್ಕುತ್ತವೆ.

ಮಧ್ಯ ಇಂಡಿಯಾ ಮತ್ತು ಡೆಕ್ಕನ್ನಿನಲ್ಲಿ ನೂತನ ಶಿಲಾಯುಧ ಮತ್ತು ಸೂಕ್ಷ್ಮ ಶಿಲಾಯುಧಗಳು ತಾಮ್ರದೊಂದಿಗೆ ಸಿಕ್ಕಿರುವುದರಿಂದ ನೂತನ ಶಿಲಾಯುಗದ ಸಂಪ್ರದಾಯವು ದಕ್ಷಿಣದಿಂದ ವಿಂಧ್ಯಪರ್ವತದವರೆಗೆ ತಾಮ್ರ ಶಿಲಾಯುಗದಲ್ಲಿ ಹರಡಿತ್ತೆಂದು ತಿಳಿದರೆ ತಪ್ಪಾಗ ಲಾರದು. ಆದ ತಾಮ್ರ ಶಿಲಾಯುಗ ಸಂಸ್ಕೃತಿಯ ವಿಷಯವನ್ನು ತಿಳಿಸುವುದಕ್ಕೆ ಮೊದಲು ನಮ್ಮ ವಾಯುವ್ಯ ಸರಹದ್ದಿನ ಸಂಸ್ಕೃತಿಯ ಕಡೆಗೆ ಗಮನವನ್ನು ಕೊಡೋಣ.

೪

ಹಿಂದೆ ಪ್ರಸ್ತಾಪಿಸಿದಂತೆ ೧೯೨೧–೨೨ರಲ್ಲಿ ಕಂಡುಹಿಡಿಯಲ್ಪಟ್ಟ ಹರಪ್ಪ ಸಂಸ್ಕೃತಿಯು ಭಾರತದ ಆದ್ಯ ನಾಗರೀಕತೆಯ ಮೂಲಾಧಾರದ ಬಗ್ಗೆ ಅದುವರೆಗೆ ಇ ಅಭಿಪ್ರಾಯಗಳಲ್ಲಿ ಕ್ರಾಂತಿಯನ್ನುಂಟುಮಾಡಿತು. ಹರಪ್ಪಾ ಸಂಸ್ಕೃತಿ 'ಕಂಚಿನ ಯುಗ ಸಂಸ್ಕೃತಿಗೆ ಸೇರಿದೆ. ಸುಟ್ಟ ಇಟ್ಟಿಗೆಯ ಕಟ್ಟಡಗಳೂ, ಸುಂದರವಾದ ನಗರ ರಚನೆ, ಬೆ ಎಲ್ಲೂ ಕಾಣಲಶ್ಯಕವಾದ ನಗರ ನೈರ್ಮಲ್ಯ ವ್ಯವಸ್ಥೆಯೂ ಈ ಸಂಸ್ಕೃತಿಯ ಹೆಗ್ಗುರುತುಗಳ ಆ ಜನರು ತಯಾರಿಸಿದ ವಸ್ತುಗಳಲ್ಲಿ ಬಳಪದಕಲ್ಲಿನ ಮುದ್ರೆಗಳು ಪ್ರಖ್ಯಾತವಾದವು. ಮುದ್ರೆಗ ಮೇಲೆ ಇದುವರೆವಿಗೂ ಓದಲಸಾಧ್ಯವಾದ ಒಂದು ಅಥವಾ ಹೆಚ್ಚು ಪಂಕ್ತಿಗಳ ಬರೆಹ ಮತ್ತ ಪ್ರಾಣಿಯ ಚಿತ್ರ ಕೊರೆಯಲಾಗಿದೆ. ಚಕ್ರದಮೇಲೆ ತಯಾರಿಸಲ್ಪಟ್ಟ ಮತ್ತು ಆಕೃತಿಗಳ ವೈಶಿಷ್ಟ್ಯವುಳ್ಳ ಕೆಂಪು ಮಣ್ಣಿನ ಪಾತ್ರೆಗಳೂ, ಅವುಗಳಮೇಲೆ ಕಪ್ಪುಬಣ್ಣದಲ್ಲಿರುವ ಚಿತ್ರಗಳ ಚೆರ್ಟ್ (chert) ಕಲ್ಲಿನ ಉದ್ದವಾದ ಅಲಗು, ಕಂಚಿನ ಸಾಮಾನು, ಮಣ್ಣಿನ ದೇವತೆಗ ವಿಗ್ರಹ; ಪ್ರಾಣಿ ಮತ್ತು ಮನುಷ್ಯಾಕೃತಿಯ ಬೊಂಬೆಗಳೂ, ಚಿನ್ನದ ಆಭರಣ ಮತ್ತ ಅಮೂಲ್ಯವಾದ ಕಲ್ಲುಗಳಿಂದ ತಯಾರಿಸಲ್ಪಟ್ಟ ಮಣಿಗಳೂ ಈ ಸಂಸ್ಕೃತಿಯ ಪ್ರಖ್ಯಾ ವಸ್ತುಗಳು.

ಮೊಹೆಂಜೊದರೊವಿನಲ್ಲ ಏಳು ಸಾರಿಯೂ, ಹರಪ್ಪದಲ್ಲಿ ಎಂಟು ಸಾರಿ ನಗರ ಪುನರ್ರಚನ ಯಾಗಿತ್ತೆಂದು ಕಂಡುಬಂದಿದೆ. ಇರಾಕ್ ದೇಶದೊಂದಿಗೆ ಹರಪ್ಪ ಸಂಸ್ಕೃತಿಯು ಹೊಂದಿದ ಸಂಬಂಧಗಳ ಆಧಾರದಮೇಲೂ ಮತ್ತು ಇತರ ಪರ್ಯಾಲೋಚನೆಯಿಂದಲೂ ಇದರ ಕಾಲಾ ವಧಿಯನ್ನು ಕ್ರಿ.ಪೂ. ೨೫೦೦ ರಿಂದ ೧೫೦೦ ರವರೆಗೆ ತಾತ್ಕಾಲಿಕವಾಗಿ ನಂಬಲಾಗಿದೆ.

ಸಿಂಧ್ ಮತ್ತು ಬಲೂಚಿಸ್ಥಾನಗಳಲ್ಲಿ ನಡೆದ ಪ್ರಾಚೀನಾನ್ವೇಷಣೆ ಫಲಿತಾಂಶವಾಗಿ ಅನೇಕ ಹರಪ್ಪ ಸಂಸ್ಕೃತಿಯ ವಸತಿಗಳು ಸಿಕ್ಕಿರುವುದಾಗಿ ಹಿಂದೆಯೇ ತಿಳಿಯಪಡಿಸಲಾಗಿದೆ ೧೯೩೫ರಲ್ಲಿ ಅಂಬಾಲ ಜಿಲ್ಲೆಯಲ್ಲಿ ಕೋಟ್ಲಾನಿಹಾಂಗ್ ಎಂಬ ವಸತಿಯನ್ನು ಕಂಡುಹಿಡಿಯಲಾಯಿತು. ೧೯೪೦–೪೧ರಲ್ಲಿ ಪ್ರಕೃತ ಪಾಕಿಸ್ಥಾನದಲ್ಲಿರುವ ಭಾವಲ್ಪೂರ ಸಂಸ್ಥಾನದಲ್ಲಿ ಸರಸ್ವತಿಯ ಶುಷ್ಕ ಪಾತ್ರದಲ್ಲಿ ಈ ಸಂಸ್ಕೃತಿಯ ಸ್ಥಳಗಳನ್ನು ಕಂಡುಹಿಡಿಯ ಲಾಯಿತು. ೧೯೪೬ರಲ್ಲಿ ಹರಪ್ಪಾ ನಗರವು ಪುನಃ ಅಗೆಯಲ್ಪಟ್ಟ ಕಾರಣ ಈ ಸಂಸ್ಕೃತಿಯ ಕೆಲವು ಹೊಸ ವಿಷಯಗಳು ಹೊರಗೆಡಹಲ್ಪಟ್ಟವು. ೧೯೫೦ ರಿಂದ ೫೩ರ ವರೆಗೆ ರಾಜಸ್ಥಾನ ದಲ್ಲಿ ಗಂಗಾನಗರ ಜಿಲ್ಲೆಯಲ್ಲಿರುವ ಸರಸ್ವತಿ ಮತ್ತು ಅದರ ಉಪನದಿ ದೃಷದ್ವತಿ ಪಾತ್ರಗಳಲ್ಲಿ ಹರಪ್ಪ ಸಂಸ್ಕೃತಿಯ ಅನೇಕ ವಸತಿಗಳು ಪತ್ತೆಹಚ್ಚಲ್ಪಟ್ಟವು. ಅದೇ ಸಮಯದಲ್ಲಿ ಕೊಟ್ಲಾ-ನಿಹಾಂಗ್ ಸಮೀಪದಲ್ಲಿರುವ 'ರೂಪರ್' ಎಂಬಲ್ಲಿ ಈ ಸಂಸ್ಕೃತಿಯ ಅವಶೇಷಗಳು ಕಂಡು ಹಿಡಿಯಲ್ಪಟ್ಟವು. ೧೯೫೩ ರಿಂದ ೫೫ರವರೆಗೆ ಆ ಸ್ಥಳವನ್ನು ವಿಶಾಲವಾಗಿ ಅಗೆಯಲಾಯಿತ ಪೂರ್ವ ಭಾರತದಲ್ಲಿ ಹರಪ್ಪ ಸಂಸ್ಕೃತಿಯ ಸಣ್ಣ ವಸತಿಯೊಂದು ಮೀರತ್ ಜಿಲ್ಲೆಯಲ್ಲಿರುವ ಯಮುನಾ ಉಪನದಿಯಾದ ಹಿಂಡೆ ದಡದಮೇಲೆ ೧೯೫೮ರಲ್ಲಿ ಆಲಂಗೀರ್‌ಪುರ್ ಎಂಬಲ್ಲಿ ಕಂಡುಹಿಡಿಯಲ್ಪಟ್ಟಿದೆ.

ದಕ್ಷಿಣದಲ್ಲಿ ಗುಜರಾತಿನ ಝಾಲಾವಾಡ್ ಜಿಲ್ಲೆಯ ರಂಗಪುರವು ಹರಪ್ಪಾ ಸಂಸ್ಕೃತಿಯ ಅವಶೇಷಗಳಿಂದ ಕೂಡಿದೆಯೆಂದು ಬಹಳ ವರ್ಷಗಳ ಹಿಂದೆ ಸಂಶಯಪಡಲಾಗಿತ್ತು ೧೯೫೩ ರಿಂದ ೫೫ರವರೆಗೆ ಕೈಗೊಂಡ ಭೂಶೋಧನೆಯಿಂದ ಈ ಸಂಶಯದ ನಿಜಾಂಶ




೫. (ಅ) ಭುಜವುಳ್ಳ ಕಲ್ಲುಗೊಡಲಿ, ದೇಉಲ್‌ಬಢ್ (ಪಶ್ಚಿಮ ಬಂಗಾಳ)



೫. (ಆ) ಸ್ಟಿಯಟೈಟ್ ಮುದ್ರೆ — ಮೊಹೆಂಜೊದರೊ.



೬. (ಅ) ಸ್ಟಿಯಟೈಟ್ ಮುದ್ರೆಛಾಪ — ಮೊಹೆಂಜೊದರೊ.

ಧಪಟ್ಟಿತು. ಗುಜರಾತಿನಲ್ಲಿ ಬಹು ಪ್ರಖ್ಯಾತವಾದ ಹರಪ್ಪ ಸಂಸ್ಕೃತಿಯ ವಸತಿ ಎಂದರೆ ಹಮದಾಬಾದ್ ಜಿಲ್ಲೆಯ ಸರಗ್ವಾಲಾ ಗ್ರಾಮದಲ್ಲಿರುವ 'ಲೋಥಲ್' ಎಂಬ ಸ್ಥಳ. ಈ ಳವನ್ನು ೧೯೫೫ ರಿಂದ ಈ ವರ್ಷದವರೆವಿಗೂ ವಿಶಾಲವಾಗಿ ಅಗೆಯಲ್ಪಟ್ಟಿದೆ. ತತ್ಕಾಲ ಲ್ಲಿ ಅತ್ಯಂತ ದಕ್ಷಿಣದಲ್ಲಿರುವ ಹರಪ್ಪ ಸಂಸ್ಕೃತಿಯ ವಸತಿ ಎಂದರೆ ತಪತಿ ಮುಖಜಭೂಮಿ ಯಲ್ಲಿರುವ 'ಭಗತ್‌ರಾವ್' ಎಂಬ ಸ್ಥಳ. ಪೂರ್ವ ಪಶ್ಚಿಮ ಮತ್ತು ಉತ್ತರ ದಕ್ಷಿಣ ೮೦೦ ಮೈಲಿ ವಿಸ್ತಾರಕ್ಕೆ ಹರಡಿರುವ ಈ ಸಂಸ್ಕೃತಿಯ ಗುಣಲಕ್ಷಣಗಳು ಎಲ್ಲಾ ಕಡೆಯಲ್ಲಿಯೂ ರ್ವಸಾಮಾನ್ಯವಾಗಿವೆ. ಈ ಸಾಮ್ಯದಲ್ಲಿ ಅಲ್ಲಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬಂದಿವೆ. ಉದಾಹರಣೆ, ಲೋಥಲ್‌ನಲ್ಲಿ ಹರಪ್ಪಾದ ಮಡಿಕೆಗಳಲ್ಲದೇ ಬೂದುಬಣ್ಣದ ಮತ್ತು ಕಪ್ಪುಮಿಶ್ರಿತ ಂಪುಮಣ್ಣಿನ ಪಾತ್ರೆಗಳು ಸಿಕ್ಕುತ್ತವೆ. ತಾತ್ಪರ್ಯದಲ್ಲಿ ಈ ಸಂಸ್ಕೃತಿಯ ವಿಸ್ತಾರವು ಅಸ ಮಾನ್ಯವಾದದ್ದೆಂದೇ ತಿಳಿಯಬೇಕು. ಏಷ್ಯಾಖಂಡದ 'ಕಂಚಿನ ಯುಗ'ದ ಸಂಸ್ಕೃತಿಗಳಲ್ಲೆಲ್ಲಾ ದು ಅತ್ಯಂತ ವಿಸ್ತಾರವಾದದ್ದೆಂದು ಹೇಳಬಹುದು.

೧೯೪೬ರಲ್ಲಿ ಹರಪ್ಪದಲ್ಲಿ ಪುನರ್ಭೂಶೋಧನೆ ನಡೆಸಿದಾಗ ಕೋಟೆಯಿಂದಾವರಿಸಿದ ವಸತಿ ಒಂದನ್ನು ಕಂಡುಹಿಡಿಯಲಾಯಿತು. ಮೇಲಿನ ಅಂಶದಿಂದ ನಗರದ ಕಟ್ಟಡಗಳೆಲ್ಲವೂ ಕೋಟೆ ಳಗಿದ್ದವೆಂದು ತೋರಿಬರುತ್ತದೆ. ಅಲ್ಲದೆ ನಗರದಲ್ಲಿ ಜೀವನವು ಪ್ರಜಾಸತ್ತಾತ್ಮಕವಾಗಿಲ್ಲದಿರ ಹುದೆಂದು ಸೂಚಿಸುತ್ತದೆ. ಶವಗಳನ್ನು ಚಾಚಿ ಹೂಳಲ್ಪಟ್ಟ ಸ್ಮಶಾನವೊಂದನ್ನು ಅಲ್ಲಿ ಗುರು ಸಲಾಯಿತು.

ರೂಪರ್‌ನಲ್ಲಿ ಸುಟ್ಟ ಮತ್ತು ಹಸಿ ಇಟ್ಟಿಗೆಗಳ ಹಾಗೂ ಕಲ್ಲಿನ ಗೋಡೆಗಳೂ, ಬಳಪದ ಲ್ಲಿನ ಮುದ್ರೆಯೂ, ಹರಪ್ಪ ಸಂಸ್ಕೃತಿಯ ಇತರ ವಸ್ತುಗಳೂ ಸಿಕ್ಕಿವೆ. ಇಲ್ಲಿ ಸ್ಮಶಾನವನ್ನು ಶೋಧಿಸಲಾಯಿತು.

ತಗ್ಗಾದ ಪ್ರದೇಶದಲ್ಲಿದ್ದುದಲ್ಲದೆ ಸಮುದ್ರಕ್ಕೆ ಸಮೀಪದಲ್ಲಿದ್ದುದರಿಂದ ಲೋಥಲ್ ವಾಸಿಕರು ಜಲಪ್ರಳಯದಿಂದ ನಗರವನ್ನು ಸಂರಕ್ಷಿಸಲು ಹಸಿ ಇಟ್ಟಿಗೆಯ ಎತ್ತರವಾದ ಜಗಲಿ ಗಳಮೇಲೆ ಮನೆಗಳನ್ನು ಕಟ್ಟುತ್ತಿದ್ದರು. ಹೀಗಿದ್ದರೂ ಜಗಲಿಗಳು ಪ್ರವಾಹದಿಂದ ಕೊಚ್ಚಿ ಹೋದವು. ಮನೆಗಳು ಸುಟ್ಟ ಇಟ್ಟಿಗೆಗಳಿಂದ ಕಟ್ಟಲ್ಪಟ್ಟಿದ್ದವು. ಬಚ್ಚಲು ಮನೆ ಮತ್ತು ಮೋರಿಗಳು ರಸ್ತೆ ಪಕ್ಕದಲ್ಲಿದ್ದ ಚರಂಡಿಗಳಿಗೆ ಸೇರುತ್ತಿದ್ದವು.

ಹರಪ್ಪನರು ಪೂರ್ವದಲ್ಲಿ ಯಮುನಾನದಿಯ ಬಯಲಿನವರೆಗೂ ನದಿ ಮಾರ್ಗವಾ ಗಿಯೇ ವಲಸೆ ಹೋದರು. ಆದರೆ ಗುಜರಾತಿಗೆ ಸಮುದ್ರ ಮಾರ್ಗವಾಗಿ ತೆರಳಿದರೆಂದು ಹೇಳಬಹುದು.

## ೫

ಇಷ್ಟೊಂದು ಪ್ರಬಲವಾದ ಹರಪ್ಪ ಸಂಸ್ಕೃತಿಯ ಜನ್ಮವೃತ್ತಾಂತ ಇನ್ನೂ ತಿಳಿದಿಲ್ಲ. ಈ ಸಂಸ್ಕೃತಿಯು ಇರಾಕ್ ದೇಶದೊಂದಿಗೆ ಸಂಬಂಧ ಹೊಂದಿದ್ದರೂ ಪಶ್ಚಿಮ ಏಷ್ಯದ ಯಾವುದೇ ಒಂದು ಭಾಗದಿಂದ ಹರಪ್ಪನ್ನರು ಭಾರತಕ್ಕೆ ವಲಸೆ ಬಂದರೆಂದು ಹೇಳಲು ಸಾಧ್ಯ ವಿಲ್ಲ. ಹರಪ್ಪ ಸಂಸ್ಕೃತಿಯು ಪ್ರೌಢಸ್ಥಿತಿಯಲ್ಲಿ ಬಲೂಚಿಸ್ಥಾನ ಮತ್ತು ಸಿಂಧ್ ಪ್ರಾಂತಗಳಿಗೆ ಬರುವುದಕ್ಕೆ ಮೊದಲು ಇನ್ನೂ ಅನೇಕ ತಾಮ್ರ ಶಿಲಾಯುಗದ ಸಂಸ್ಕೃತಿಗಳು ಅಲ್ಲಿದ್ದವೆಂದು ತಿಳಿದುಬಂದಿದೆ. ಸಿಂಧ್‌ನಲ್ಲಿರುವ ಅಮ್ರಿಯ ವಿಚಾರವಾಗಿ ಹಿಂದೆಯೇ ಹೇಳಲಾಗಿದೆ. ಬಲೂಚಿಸ್ಥಾನದಲ್ಲಿ ಹರಪ್ಪ ಸಂಸ್ಕೃತಿಗಿಂತ ಮುಂಚಿನ ಸಂಸ್ಕೃತಿಗಳು, ಕುಲ್ಲಿ, ಮೆಹಿ, ರಾಣಾ

ಘುಂಡೈ, ಕ್ವೆಟ್ಟ, ಚೋಗೋ, ಮೊದಲಾದ ಸ್ಥಳಗಳಲ್ಲಿ ಕಂಡುಬಂದಿವೆ. ಇವುಗಳಲ್ಲಿ ಕೆಲವ ಹರಪ್ಪನ್ನರ ಸಮಕಾಲೀನವಾಗಿದ್ದವು. ಆದ್ದರಿಂದ ಬೆಲೂಚಿಸ್ಥಾನವು ಒಂಟೊಂಟಿಯಾದ ಸಣ್ಣ ಸಣ್ಣ ಸ್ವತಂತ್ರ ಗ್ರಾಮಗಳ ತೌರುಮನೆಯಾಗಿತ್ತು. ಹರಪ್ಪ ಸಂಸ್ಕೃತಿಯೊಂದಿಗೆ ಸಂಬಂಧವನ್ನು ಸೂಚಿಸುವ ಕೆಲವು ಚಿಹ್ನೆಗಳು ಈ ಸಂಸ್ಕೃತಿಗಳಲ್ಲಿ ಕಂಡುಬಂದರೂ, ಇವುಗಳೆಲ್ಲವ ಹರಪ್ಪ ಸಂಸ್ಕೃತಿಯ ಮೂಲ ಸಂಸ್ಕೃತಿಗಳಲ್ಲವೆಂದು ಹೇಳಬಹುದು.

ಹರಪ್ಪ ಸಂಸ್ಕೃತಿಯ ಅವಸಾನವೂ ಕೂಡ ನಮಗೆ ನಿರ್ಧಾರವಾಗಿ ತಿಳಿದಿಲ್ಲ. ಇದರ ನಾಶಕ್ಕೆ ಪರಕೀಯರ ದಂಡಯಾತ್ರೆ, ಜಲಪ್ರಳಯ, ಮರುಭೂಮಿಯಾಗುವಿಕೆ ಮುಂತಾದ ಕಾರಣವನ್ನು ಸೂಚಿಸಿದ್ದರೂ, ಖಚಿತವಾಗಿ ನಿರ್ಧರಿಸಲು ಸಾಧ್ಯವಿಲ್ಲ. ಈ ವಿಷಯವಾಗಿ ಉತ್ತರದಲ್ಲಿ ಪುರಾತತ್ವದ ದೃಷ್ಟಿಯಿಂದ ರುಜುವಾತು ಖಚಿತವಾಗಿಲ್ಲ. ಮೊಹೆಂಜೊದರೊ ನಗರದ ಅಂತ್ಯಕಾಲದಲ್ಲಿ ಸಂಸ್ಕೃತಿಯು ಕ್ಷೀಣದೆಶೆಯಲ್ಲಿದ್ದುದು ಗೊತ್ತಾಗಿದೆ ಮತ್ತು ಹೊರಗಿ ನವರು ಸ್ವಲ್ಪಮಟ್ಟಿಗೆ ನಗರವನ್ನು ನಾಶಮಾಡಿದ್ದುದು ಕಂಡುಬರುತ್ತದೆ. ಸಿಂಧ್ ಪ್ರಾಂತ ದಲ್ಲಿರುವ ಝುಕಾರ್ ಮತ್ತು ಚನ್ಹುದಾರೊ ಎಂಬ ಸ್ಥಳಗಳಲ್ಲಿ ಹರಪ್ಪ ಸಂಸ್ಕೃತಿಯ ನಂತರ ಝುಕಾರ್ ಸಂಸ್ಕೃತಿ ಎಂಬ ಬೇರೆಯೊಂದು ಸಂಸ್ಕೃತಿಯು ಬಂದಿತು. ಈ ಸಂಸ್ಕೃತಿ ಯಲ್ಲಿ ಬೂದುಬಣ್ಣದಮೇಲೆ ಕೆಂಪು ಅಥವಾ ನೇರಲೆ ಬಣ್ಣದಲ್ಲಿ ಚಿತ್ರಿಸಿರುವ ಮಣ್ಣಿನ ಪಾತ್ರೆಗಳ ಉಪಯೋಗದಲ್ಲಿದ್ದವು. ಹರಪ್ಪ ಸಂಸ್ಕೃತಿಯಿಂದಲೇ ಝುಕಾರ್ ಸಂಸ್ಕೃತಿಯು ಜನ್ಮ ತಾಳಿ ತೆಂದು ಹೇಳಲು ಯಾವ ಆಧಾರವೂ ಇಲ್ಲ. ಹರಪ್ಪದಲ್ಲಿಯೇ ''ಸಿಮೆಟ್ರಿ–ಎಚ್'' ಎಂಬ ಬೇರೊಂದು ಸಂಸ್ಕೃತಿಯು ಶುದ್ಧ ಹರಪ್ಪ ಸಂಸ್ಕೃತಿಯ ಭಗ್ನಾವಶೇಷಗಳಮೇಲೆ ಸ್ಥಾಪಿಸಲ್ಪಟ್ಟಿತ್ತು. ಈ ಸಂಸ್ಕೃತಿಯ ಜನರು ಶವಗಳನ್ನು ಹೂಳಲು ಉಪಯೋಗಿಸುತ್ತಿದ್ದ ಮಣ್ಣಿನ ಬೃಹತ್ ಪಾತ್ರೆಗಳ ಬಣ್ಣಗಳಾಗಲೀ ಅಥವಾ ಚಿತ್ರಗಳಾಗಲೀ, ಹರಪ್ಪ ಸಂಸ್ಕೃತಿಯ ಮಣ್ಣಿನ ಪಾತ್ರೆಗಳ ಬಣ್ಣ ಮತ್ತು ಚಿತ್ರಗಳನ್ನು ಯಾವ ರೀತಿಯಲ್ಲಿಯೂ ಹೋಲುವುದಿಲ್ಲ. ಹರಪ್ಪನ್ನರು ತಮ್ಮ ವಸತಿಯನ್ನು ತ್ಯಜಿಸಿದ ಕೆಲವು ಕಾಲಾನಂತರ ''ಸಿಮೆಟ್ರಿ–ಎಚ್'' ಜನರು ಮಾಡಿದ ಸಮಾಧಿಗಳನ್ನು ನೋಡಬಹುದು.

ಇನ್ನೂ ಪೂರ್ವದಿಕ್ಕಿನ ನದಿಯ ಮೈದಾನಗಳಲ್ಲಿ ಹರಪ್ಪನ್ನರ ನಂತರ ಬಂದ ಬೇರೊಂದು ಜನರಗುಂಪು ಚಿತ್ರಿತಕಂದು ಮಡಿಕೆಗಳನ್ನು (Painted Grey Ware) ಉಪಯೋಗಿಸುತ್ತಿದ್ದುದು ಕಂಡುಬಂದಿದೆ. ಈ ಜನರ ವಿಷಯ ವಿಶದವಾಗಿ ಮುಂದೆ ತಿಳಿಸಲಾಗುತ್ತೆ. ಆದರೆ ಹರಪ್ಪನ್ನರು ತಮ್ಮ ವಸತಿಗಳನ್ನು ತ್ಯಜಿಸಿದ ಎಷ್ಟೋ ವರ್ಷಗಳ ನಂತರ ಚಿತ್ರಿತ ಕಂದು ಮಡಿಕೆಗಳ ನಿರ್ಮಾ ಪಕರು ಆ ಸ್ಥಳಗಳಲ್ಲಿ ನೆಲಸಿದರೆಂದು ಖಚಿತವಾಗಿ ಗೊತ್ತಾಗಿದೆ. ಆದ್ದರಿಂದ ಹರಪ್ಪ ಸಂಸ್ಕೃತಿ ಅದೃಶ್ಯವಾದನಂತರ ಉತ್ತರ ಭಾರತದ ಪುರಾತತ್ವದಲ್ಲಿ ಮಹದಂತರವುಂಟಾಗಿದೆ.

ಗುಜರಾತಿನ ಇತಿಹಾಸ ಬೇರೆಯಾಗಿರಬಹುದು. ರಂಗಪುರ ಮತ್ತು ಲೋಥಲ್‌ಗಳಲ್ಲಿ ಹರಪ್ಪ ಸಂಸ್ಕೃತಿಗೂ ಹಾಗೂ ಅವರ ನಂತರ ಬಂದವರ ಸಂಸ್ಕೃತಿಗೂ ಅನೇಕ ಸಮಾನ ಲಕ್ಷಣಗಳೂ ತೋರಿಬರುತ್ತವೆ. ನಂತರ ಬಂದವರು ಉಪಯೋಗಿಸುತ್ತಿದ್ದ ಕೆಲವು ಮಣ್ಣಿನ ಪಾತ್ರೆಗಳ ಆಕಾರಗಳು ಹರಪ್ಪನ್ನರ ಪಾತ್ರೆಗಳ ಆಕಾರಗಳನ್ನೇ ಹೋಲುತ್ತವೆ. ಆದ್ದರಿಂದ ನಂತರ ಬಂದ ಸಂಸ್ಕೃತಿಯು ಹರಪ್ಪ ಸಂಸ್ಕೃತಿಯಿಂದ ಜನ್ಮ ತಾಳಿತೆಂದು ಹೇಳಬಹುದು.

ಹರಪ್ಪ ಸಂಸ್ಕೃತಿಯ ಅಂತ್ಯ ಸ್ವರೂಪಗಳು ಕಾಠೇವಾಡ್ (ಗುಜರಾತ್) ಪರ್ಯಾಯ ದ್ವೀಪದಲ್ಲಿ ರೋಜ್ಡಿ ಮತ್ತಿತರ ಸ್ಥಳಗಳಲ್ಲಿ ಕಂಡುಬಂದಿವೆ. ಗುಜರಾತಿನಲ್ಲಿ ಹರಪ್ಪನ್ನರ ತರು ವಾಯ ಬಂದ ಸಂಸ್ಕೃತಿಗಳು ಇನ್ನೂ ಕೆಲವಿದ್ದವು. ಪ್ರಭಾಸ್ ಪಟ್ಟಣದಲ್ಲಿ ಗೋಚರವಾದ ಸಂಸ್ಕೃತಿಯು ಒಂದು ಸ್ಥಳೀಯ ಸಂಸ್ಕೃತಿಯಾಗಿರುತ್ತದೆ.



೬. (ಅ) ಸ್ಟಿಯಟೈಟ್ ಮುದ್ರೆ, ಮೊಹೆಂಜೊದರೊ.



೭. ನೃತ್ಯಕಿ. (ಹಿತ್ತಾಳೆ) — ಮೊಹೆಂಜೊದರೊ.



೭. ನೃತ್ಯಕಿ (ಹಿತ್ತಾಳೆ) — ಮೊಹೆಂಜೊದಗೊ.



೮. ಸಾರ್ವಜನಿಕ ಮತ್ತು ಖಾಸಗಿ ಚರಂಡಿ ಹಾಗು ಬಚ್ಚಲು ಮನೆಗಳು, ಲೋಥಲ್.

೬

ಮೈಸೂರು ಸಂಸ್ಥಾನದಲ್ಲಿರುವ ಬ್ರಹ್ಮಗಿರಿಯಲ್ಲಿ ಭೂಶೋಧನೆ ನಡೆಸಿದ ಲಿತಾಂಶವಾಗಿ ತಾಮ್ರ ಶಿಲಾಯುಗದ ಸಂಸ್ಕೃತಿಯು ಗೋಚರವಾಯಿತು. ಈ ಸಂಸ್ಕೃತಿ ಲ್ಲಿ ಕಂದುಮಿಶ್ರಿತ ಕೆಂಪು ಮೃತ್ಪಾತ್ರೆ (red and grey ware) ಗಳೊಂದಿಗೆ ನೂತನ ಲಾಯುಧ, ಸೂಕ್ಷ್ಮ ಶಿಲಾಯುಧ, ಚರ್ಟ್ ಕಲ್ಲಿನ ಉದ್ದವಾದ ಅಲಗು ಮತ್ತು ತಾಮ್ರ ವಸ್ತು ಳು ಉಪಯೋಗಿಸಲ್ಪಡುತ್ತಿದ್ದವು. ಕೆಂಪು ಮಡಿಕೆಗಳಮೇಲೆ ಕಪ್ಪು ಬಣ್ಣದ ಚಿತ್ರಗಳಿದ್ದವು. ತ್ತೀಚಿನ ಸಂಶೋಧನೆಯಿಂದ ತಾಮ್ರ ಶಿಲಾಯುಗದ ಸಂಸ್ಕೃತಿಗಳು ಕ್ರಿ. ಪೂ. ಎರಡನೇ ಹಸ್ರಾಬ್ಧಿಯ ಉತ್ತರಾರ್ಧದಲ್ಲಿಯೂ ಮತ್ತು ಮೊದಲನೇ ಸಹಸ್ರಾಬ್ಧಿಯ ಪೂರ್ವಾರ್ಧ ಲ್ಲಿಯೂ ಡೆಕ್ಕನ್ ಮತ್ತು ಮಧ್ಯ ಹಿಂದೂಸ್ಥಾನದಲ್ಲೆಲ್ಲಾ ಹರಡಿದ್ದವೆಂದು ತೋರಿಬರುತ್ತದೆ. ಕೆಳಗೆ ಕಂಡ ತಾಮ್ರ ಶಿಲಾಯುಗದ ಸ್ಥಳಗಳಲ್ಲಿ ಇದುವರೆಗೆ ಅಗೆಯಲಾಗಿದೆ:—

1 ತುಂಗಭದ್ರಾ ಬಯಲಿನಲ್ಲಿ ... ಬ್ರಹ್ಮಗಿರಿ ಮತ್ತು ಮಾಸ್ಕಿ

2 ಗೋದಾವರಿ ಬಯಲಿನಲ್ಲಿ ... ನಾಸಿಕ್, ಜೋರ್ವೆ, ನಿವಾಸ, ಮತ್ತು ದೈಮಾಬಾದ್.

3 ನರ್ಮದಾ ಬಯಲಿನಲ್ಲಿ ... ಮಹೇಶ್ವರ, ನವ್ದಾಟೋಲಿ, ತ್ರಿಪುರಿ.

4 ಚಂಬಲ್ ಬಯಲಿನಲ್ಲಿ ... ನಾಗದ

5 ತಪತಿ ಬಯಲಿನಲ್ಲಿ ... ಬಹಾರ್, ಪ್ರಕಾಶ.

ಪ್ರತಿಯೊಂದು ಭಾಗದಲ್ಲೂ ಈ ಸಂಸ್ಕೃತಿಯು ತನ್ನದೇ ಆದ ವಿಶೇಷ ಗುಣಲಕ್ಷಣಗಳನ್ನು ಹೊಂದಿದ್ದರೂ ಈ ಸಂಸ್ಕೃತಿಯಲ್ಲಿ ಕೆಲವು ಸಮಾನ ಲಕ್ಷಣಗಳನ್ನು ನೋಡಬಹುದು. ಅವು ಯಾವುದೆಂದರೆ, ನೂತನ ಮತ್ತು ಸೂಕ್ಷ್ಮ ಶಿಲಾಯುಧಗಳ ಬಳಕೆ, ತಾಮ್ರ ವಸ್ತುಗಳ ಉಪ ಯೋಗ ಮತ್ತು ಕೆಂಪು ಮೃತ್ಪಾತ್ರೆಗಳ ಮೇಲೆ ಕಪ್ಪು ಬಣ್ಣದಲ್ಲಿ ಚಿತ್ರಿಸಿರುವುದು; ಎರಡನೆಯ ದಾಗಿ ಈ ಸಂಸ್ಕೃತಿಗಳು ಪರಸ್ಪರವಾಗಿ ಸಮಕಾಲೀನವಾಗಿರುವುದಲ್ಲದೇ ಗುಜರಾತಿನ ಹರಪ್ಪ ಸಂಸ್ಕೃತಿಯ ಅಂತ್ಯ ಸ್ವರೂಪಕ್ಕೆ ಸಮಕಾಲೀನವಾಗಿವೆ. ಕೆಲವು ಭಾಗಗಳಲ್ಲಿ ತಾಮ್ರ ಲಾ ಸಂಸ್ಕೃತಿಯು ಮಿಕ್ಕ ಕೆಲವು ಭಾಗಗಳಿಗಿಂತ ಮುಂಚೆಯೇ ಅಂಕುರಿಸಿರಬಹುದು.

ರಾಜಸ್ಥಾನದಲ್ಲಿ ಉದಯಪುರದ ಸಮೀಪದಲ್ಲಿರುವ 'ಅಹಾಡ್' ಎಂಬಲ್ಲಿ ತಾಮ್ರ ಶಿಲಾ ಸಂಸ್ಕೃತಿಯು ಮುಖ್ಯವಾಗಿ ಸೂಕ್ಷ್ಮ ಶಿಲಾಯುಧಗಳನ್ನೂ ಚಿತ್ರಿಸಲ್ಪಟ್ಟ ಅಥವಾ ತ್ರಿಸದೇ ಇರುವ ಕಪ್ಪು ಮಿಶ್ರಿತ ಕೆಂಪು ಮಣ್ಣುಪಾತ್ರೆಗಳನ್ನೊಳಗೊಂಡಿದೆ.

ಉತ್ತರದ ಕೆಲವು ಪ್ರಾಚೀನ ಸ್ಥಳಗಳಲ್ಲಿ ತಾಮ್ರ ಶಿಲಾ ಸಂಸ್ಕೃತಿಯಾದನಂತರ 'ಕಪ್ಪು ಮಿಶ್ರಿತ ಕೆಂಪು' (Black and Red Ware) ಮಣ್ಣು ಪಾತ್ರೆಗಳನ್ನು ಪಯೋಗಿಸುತ್ತಿದ್ದ ಸಂಸ್ಕೃತಿಯೊಂದು ತಲೆದೋರಿತು. ಮಡಿಕೆಗಳನ್ನು ತಲೆಕೆಳಗಾಗಿ ಸುಡುತ್ತಿದ್ದುದರಿಂದ ಗಾಳಿಗೆ ಟ್ಟ ಹೊರಭಾಗವು ಕೆಂಪಾಗಿಯೂ ಬಿಡದ ಒಳಭಾಗವು ಕಪ್ಪಾಗಿಯೂ ಇದ್ದವು. ಕ್ರಿ.ಪೂ. ಳನೇ ಶತಮಾನದ ಉಜ್ಜಯನಿಯಲ್ಲಿ ಈ ಸಂಸ್ಕೃತಿಯು ಅಂಕುರವಾದ ಕಾಲದಲ್ಲಿ ಕಬ್ಬಿಣದ ಉಪಯೋಗ ತಿಳಿದಿತ್ತೆಂದು ಕಂಡುಬಂದಿದೆ.

೭

ಹಿಂದೆ ಹೇಳಿದಂತೆ ಉತ್ತರ ಹಿಂದೂಸ್ಥಾನದ ಬಯಲಿನಲ್ಲಿ ಹರಪ್ಪ ಸಂಸ್ಕೃತಿಯಾ
ನಂತರ ಚಿತ್ರಿತ ಕಂದು ಮೃತ್ಪಾತ್ರೆಗಳನ್ನು ಉಪಯೋಗಿಸುತ್ತಿದ್ದ ಸಂಸ್ಕೃತಿ ಹರಡಿತು
ಅಂಬಾಲಾ ಜಿಲ್ಲೆಯಲ್ಲಿರುವ ರೂಪರ್‌ನಲ್ಲಿ ಭೂಶೋಧನೆ ನಡೆಸಿದ ಕಾರಣ ಹರಪ್ಪ ಸಂಸ್ಕೃತಿಯ
ಅಂತ್ಯಕ್ಕೂ, ಚಿತ್ರಿತ ಕಂದು ಮೃತ್ಪಾತ್ರ ಸಂಸ್ಕೃತಿಯ ಆದ್ಯಕ್ಕೂ ಮಧ್ಯೆ ಅಂಧಕಾರವಿ
ಯೆಂದು ತಿಳಿದಿದೆ.

ಮೇಲೆ ಸೂಚಿಸಿದ ಸಂಸ್ಕೃತಿ ಉತ್ತರ ರಾಜಸ್ಥಾನ, ಪಂಜಾಬು ಮತ್ತು ಉತ್ತರ ಪ್ರದೆ
ಶದ ಮಧ್ಯಭಾಗಗಳ ಅನೇಕ ಪ್ರಾಚೀನ ಸ್ಥಳಗಳಲ್ಲಿ ಸಿಕ್ಕಿದೆ. ಇವುಗಳಲ್ಲಿ ಮುಖ್ಯಸ್ಥಳವೆಂದ
ಮೀರತ್ ಜಿಲ್ಲೆಯಲ್ಲಿರುವ ಹಸ್ತಿನಾಪುರ. ಆ ಸ್ಥಳದಲ್ಲಿ ಒರಟಾದ ಕೆಂಬಣ್ಣದ ಭಗ್ನಾ
ಶೇಷಗಳಮೇಲೆ ಚಿತ್ರಿತ ಕಂದು ಮೃತ್ಪಾತ್ರೆಗಳ ಅವಶೇಷಗಳು ಸಿಕ್ಕಿರುವ ಪ್ರಯುಕ್ತ ಗಂಗ
ನದಿಯ ಬಯಲಿನಲ್ಲಿ ಸಿಕ್ಕಿರುವ ತಾಮ್ರಾಯುಧಗಳ ನಿಕ್ಷೇಪಗಳಿಗೆ ಸಂಬಂಧಪಟ್ಟವುಗಳೆಂದ
ಅನುಮಾನಿಸಲಾಗಿದೆ.

ಹಸ್ತಿನಾಪುರ ಮತ್ತು ರೂಪರ್‌ನಲ್ಲಿ ಕಪ್ಪು ಮಿಶ್ರಿತ ಕೆಂಪು ಪಾತ್ರೆಗಳೊಂದಿಗೆ ಚಿತ್ರಿ
ಕಂದು ಮೃತ್ಪಾತ್ರೆಗಳೂ ಕೂಡ ಸಿಕ್ಕಿವೆ. ಆ ಕಾಲದಲ್ಲಿ ಸುಟ್ಟ ಇಟ್ಟಿಗೆಗಳು ಉಪಯೋ
ದಲ್ಲಿರಲಿಲ್ಲ ಹಸ್ತಿನಾಪುರದಲ್ಲಿ ಜಲಪ್ರಳಯದಿಂದ ನಾಶವಾದ ಈ ಸಂಸ್ಕೃತಿಯ ಅಂತ್ಯದ
ಕಬ್ಬಿಣ ಉಪಯೋಗಕ್ಕೆ ಬಂತು. ಚಿತ್ರಿತ ಕಂದುಬಣ್ಣದ ಮೃತ್ಪಾತ್ರೆಗಳ ಸಂಸ್ಕೃತಿಯ
ಕ್ರಿ.ಪೂ. ಮೊದಲನೇ ಸಹಸ್ರಾಬ್ದಿಯ ಮೊದಲನೇ ಮೂರು ಶತಮಾನಗಳಲ್ಲಿ ಉನ್ನತ ಸ್ಥಿ
ಯಲ್ಲಿತ್ತು. ಪಶ್ಚಿಮ ಪಂಜಾಬೊಂದನ್ನು ಬಿಟ್ಟು ಆರ್ಯರು ಭಾರತಕ್ಕೆ ವಲಸೆ ಬಂ
ಪ್ರಾರಂಭದಲ್ಲಿ ನೆಲಸಿದ ಸ್ಥಳಗಳಲ್ಲಿಯೂ ಮತ್ತು ವೇದ-ಕಾವ್ಯಗಳಲ್ಲಿ ಸೂಚಿಸಿರುವ ಸ್ಥ
ಗಳಲ್ಲಿಯೂ ಚಿತ್ರಿತ ಕಂದು ಮೃತ್ಪಾತ್ರೆಗಳು ಸಿಕ್ಕಿರುವುದರಿಂದ ಈ ಪಾತ್ರೆಗಳನ್ನು ಆರ್ಯರ
ತಯಾರಿಸಿರುವ ಸ್ವತ್ತೆಂದು ಊಹಿಸಲಾಗಿದೆ.

೮

ತದನಂತರ ಮಧ್ಯಭಾರತ ಪುರಾತತ್ವದಲ್ಲಿ ನಡೆದ ಘಟನೆ ಎಂದರೆ ‹ಉತ್ತರ ಭಾರತೀಯ
ಪ್ರಕಾಶಿಸುವ ಕಪ್ಪು ಮೃತ್ಪಾತ್ರೆಗಳು' ಉಪಯೋಗದಲ್ಲಿ ಬಂದದ್ದು. ಇವು ಕೆಲವು ವೇಳೆ ಇತ
ಬಣ್ಣಗಳಲ್ಲಿಯೂ ಕಂಡುಬಂದಿವೆ. ಇವನ್ನು 'Northern Black Polished Ware
ಎಂದು ಕರೆಯುತ್ತಾರೆ. ಅಲಹಾಬಾದ್ ಜಿಲ್ಲೆಯ ಕೌಶಾಂಬಿಯಲ್ಲಿಯೂ
ವಾರಣಾಸಿಯ ರಾಜ್‌ಘಾಟ್ ಎಂಬಲ್ಲಿಯೂ ಈ ತರಹದ ಪಾತ್ರೆಗಳು ಹೇರಳವಾಗಿ ಸಿಕ್ಕಿವೆ
ಆದ್ದರಿಂದ ಈ ಗುಂಪಿನ ಪಾತ್ರೆ ಗಂಗಾನದಿಯ ಬಯಲಿನಲ್ಲಿ ಜನಿಸಿ ಕ್ರಮೇಣ ಭಾರ
ದಲ್ಲೆಲ್ಲಾ ಹಬ್ಬಿತೆಂದು ಭಾವಿಸಲಾಗಿದೆ. ವಾಯುವ್ಯದಲ್ಲಿ ತಕ್ಷಶಿಲೆಯಲ್ಲಿಯೂ, ದಕ್ಷಿಣದ
ಗುಂಟೂರ್ ಜಿಲ್ಲೆಯ ಅಮರಾವತಿಯಲ್ಲಿಯೂ ಇದು ಸಿಕ್ಕಿದೆ. ತಕ್ಷಶಿಲೆಯಲ್ಲಿ ಅಲೆಗ್ಸಾಂಡರ
ನಾಣ್ಯಗಳು ಕಂಡುಬಂದ ಸ್ತರಗಳ ಕೆಳಗೆ ಉತ್ತರ ಭಾರತೀಯ ಪ್ರಕಾಶಿಸುವ ಕಪ್
ಮೃತ್ಪಾತ್ರೆಗಳು ಸಿಗುವುದರಿಂದ ಕ್ರಿ.ಪೂ. ಐದು-ಆರನೇ ಶತಮಾನಗಳಲ್ಲಿ ಇವು ಉಪಯೋಗಕ
ಬಂದಿರಬೇಕು. ಪಶ್ಚಿಮ ಮತ್ತು ಮಧ್ಯ ಇಂಡಿಯಾ ಹಾಗೂ ಡೆಕ್ಕನ್ನಿನ ಅನೇಕ ಪ್ರಾಚೀ

ಸ್ಥಳಗಳಲ್ಲಿ ಮೇಲೆ ತಿಳಿಸಿದ ಪಾತ್ರೆಗಳು ತಾಮ್ರ ಶಿಲಾಯುಗದ ಅವಶೇಷಗಳ ಮೇಲಿನ ಸ್ತರಗಳಲ್ಲಿ ಸಿಕ್ಕಿವೆ. ಕ್ರಿ. ಪೂ. ಎರಡನೇ ಶತಮಾನದನಂತರ ಉತ್ತರ ಭಾರತೀಯ ಪ್ರಕಾಶಿಸುವ ಕಪ್ಪು ಪಾತ್ರೆಗಳು ಸಿಕ್ಕುವುದಿಲ್ಲ.

ಉತ್ತರ ಭಾರತದಲ್ಲಿ ದೊಡ್ಡ ನಗರಗಳು ನಿರ್ಮಾಣವಾದ ಈ ಕಾಲದಲ್ಲಿ ಬುದ್ಧ ಮತ್ತು ಮಹಾ ವೀರರ ಯುಗವೂ ಪ್ರಾರಂಭವಾಯಿತು. ಕಟ್ಟಡಗಳಲ್ಲಿ ಸುಟ್ಟ ಇಟ್ಟಿಗೆಗಳನ್ನು ಬಹಳವಾಗಿ ಉಪಯೋಗಿಸಲಾಯಿತು. ನಾಣ್ಯ ಮತ್ತು ಕಬ್ಬಿಣ ವಿಶೇಷವಾಗಿ ಬಳಕೆಗೆ ಬಂದವು. ಈ ಉನ್ನತ ಸ್ಥಿತಿಯಲ್ಲಿದ್ದ ಕಾಲವೇ ಭಾರತದ ಆದಿ ಇತಿಹಾಸದ ಪ್ರಾರಂಭ.



೬

ಪ್ರಾಯಶಃ ಮೊದಲನೇ ಸಹಸ್ರಾಬ್ದಿಯು ಉತ್ತರಾರ್ಧದ ಕೊನೆಯಲ್ಲಿ ಒಂದು ಹೊಸ ಸಂಸ್ಕೃತಿ ದಕ್ಷಿಣ ಭಾರತದಲ್ಲಿ ಜನ್ಮ ತಾಳಿತು. ಈ ಜನರು ಶವಗಳನ್ನು ಗಾಳಿಗೆ ಬಿಟ್ಟ ನಂತರ ಕೆಲವು ತೊಡಕಿಲ್ಲವ ಎಲಬುಗಳನ್ನು ದೊಡ್ಡ ಬಂಡೆಗಳಿಂದ ತಯಾರಿಸಲ್ಪಟ್ಟ ಗೋರಿಗಳಲ್ಲಿ ಹೂತು ಮೇಲೆ ಚಪ್ಪಟೆಯಾದ ಕಲ್ಲನ್ನು ಮುಚ್ಚುತ್ತಿದ್ದರು. ಈ ರೀತಿಯ ಶವಸಂಸ್ಕಾರ ಇವರ ವಿಶೇಷ ಲಕ್ಷಣವಾಗಿತ್ತು. ಇವುಗಳನ್ನು ಬೃಹತ್ ಶಿಲಾಗೋರಿ (megalith) ಗಳೆಂದು ಕರೆಯಲಾಗಿದೆ. ಈ ಸಂಪ್ರದಾಯಕ್ಕೆ ಒಳಗೊಂಡವರಿಗೆ "ಬೃಹತ್ ಶಿಲಾ ಗೋರಿಯ ಸಂಸ್ಕೃತಿ" ಜನರೆಂದು ಹೇಳಲಾಗಿದೆ.

ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋದ ಹಾಗೆ ಗೋರಿಗಳ ಆಕಾರವೂ ಬದಲಾಯಿಸುತ್ತದೆ. ಕೆಲವು ವೇಳೆ ಶಿಲಾರಹಿತವಾಗಿರುವುದು ಉಂಟು. ಆದರೆ ಇವುಗಳಲ್ಲಿ ಸರ್ವ ಸಾಮಾನ್ಯವಾದ ಅಂಶಗಳೆಂದರೆ ಅಸ್ಥಿಯನ್ನು ಹೂಳುವುದು, ಕಪ್ಪು ಮಿಶ್ರಿತ ಕೆಂಪು ಮಡಿಕೆ ಮತ್ತು ಕಬ್ಬಿಣದ ವಸ್ತುಗಳ ಉಪಯೋಗ. ದ್ರಾವಿಡರು ಈ ಸಂಸ್ಕೃತಿಯ ಕರ್ತೃಗಳೆಂದು ಕೆಲವು ಪ್ರಾಜ್ಞರು ಸೂಚಿಸಿದ್ದಾರೆ.

ಬ್ರಹ್ಮಗಿರಿ ಮತ್ತು ಮಾ[illegible] ಯಲ್ಲಿ ತಾಮ್ರ ಶಿಲಾ ಸಂಸ್ಕೃತಿಯ ಮೇಲೆ ಬೃಹತ್ ಶಿಲಾ ಗೋರಿಯ ಸಂಸ್ಕೃತಿ ಸಿಕ್ಕಿದ್ದಲ್ಲದೆ, ಕ್ರಿ. ಶ. ೧ನೇ ಶತಮಾನದ ಶಾತವಾಹನರ ಸಮಕಾಲೀನವಾದ ಸಂಸ್ಕೃತಿಯೂ ತಿಳಿದುಬಂದಿದೆ. ಈ ಸಂಸ್ಕೃತಿಯ ವೈಶಿಷ್ಟ್ಯವೇನೆಂದರೆ ಗುಲಾಬಿ ಬಣ್ಣದ ಮೃತ್ಪಾತ್ರೆಗಳು ಬಿಳೀ ರೇಖೆಗಳಿಂದ ಚಿತ್ರಿಸಲ್ಪಟ್ಟಿವೆ.

ಕ್ರಿ.ಶ. ೧ನೇ ಶತಮಾನದಲ್ಲಿ ಭಾರತ ಪರ್ಯಾಯವು ದ್ವೀಪವು ರೋಮನ್‌ರೊಡನೆ ವ್ಯಾಪಾರ ಸಂಪರ್ಕ ಹೊಂದಿತ್ತು. ವ್ಯಾಪಾರಮೂಲಕ ಅದರಲ್ಲಿಯೂ ದಕ್ಷಿಣದಲ್ಲಿ, ಬಂದ ಸಾವಿರಾರು ರೋಮ್ನ ನಾಣ್ಯಗಳು ದಕ್ಷಿಣ ಭಾರತದಲ್ಲಿ, ವಿಶೇಷವಾಗಿ ಸಿಕ್ಕಿವೆ. ಸಮುದ್ರ ತೀರದ ವ್ಯಾಪಾರ ಕೇಂದ್ರವಾಗಿದ್ದ ಅರಿಕ್‌ಮೆಡು ಎಂಬಲ್ಲಿ ಭೂಶೋಧನೆ ಮಾಡಿದ ಪ್ರಯುಕ್ತವಾಗಿ ರೋಮಿನ ಅರೆಜ್ಜೊದಲ್ಲಿ ತಯಾರಾಗಿ ಕುಂಬಾರನ ಹೆಸರುಳ್ಳ ಮೃತ್ಪಾತ್ರೆಗಳೂ, ರೊಲೆಟೆಡ್ ವೇರ್ (Rouletted Ware) ಮತ್ತು ಎರಡು ಹಿಡಿಯ ಪಾತ್ರೆಯೂ ಬೆಳಕಿಗೆ ಬರಲಾಗಿದೆ. ಕ್ರಿ.ಪೂ. ಮೊದಲನೇ ಶತಮಾನಕ್ಕೆ ಸೇರಿದ ರೋಮಿನ ಸೇಮಿಯನ್ (Samian) ಮೃತ್ಪಾತ್ರೆಗಳನ್ನು ಹೋಲುವ, ಹೊಳೆಯುವ ಕೆಂಪು ಮೃತ್ಪಾತ್ರೆಗಳು (Red Polished Ware) ಭಾರತದ ಅನೇಕ ಭಾಗಗಳಲ್ಲಿ ಕಂಡುಬಂದರೂ, ಪಶ್ಚಿಮ ಭಾರತದಲ್ಲೇ ಹೆಚ್ಚಾಗಿವೆ.

## ೧೦

ಉತ್ತರ ಮತ್ತು ಮಧ್ಯ ಭಾರತದಲ್ಲಿ ರೂಪರ್, ಹಸ್ತಿನಾಪುರ, ಮಥುರಾ, ಅಹಿಚ್ಛತ್ರ ಸ್ರಾವಸ್ತಿ, ರಾಜಗೃಹ, ಚಂದ್ರಕೇತುಗಢ್, ಉಜ್ಜಯನಿ ಇತ್ಯಾದಿ ಸ್ಥಳಗಳಲ್ಲಿ ಭೂಶೋಧನ ಫಲಿತಾಂಶವಾಗಿ ಉತ್ತರ ಭಾರತೀಯ ಪ್ರಕಾಶಿಸುವ ಕಪ್ಪು ಮೃತ್ಪಾತ್ರಾ ಸಂಸ್ಕೃತಿನಂತರ ವಸಾಹತುಗಳ ಅವಶೇಷಗಳು ಕಂಡುಬಂದಿವೆ. ಪ್ರಸ್ತುತ ಇವುಗಳಿಂದ ಪ್ರಾಚ್ಯ ವಸ್ತುಗ ಕಾಲ ನಿರ್ಮಾಣ ಮಾಡಬಹುದು. ಗೊತ್ತಾದ ಕಾಲದ ರಾಜರ ನಾಣ್ಯಗಳೂ, ಮುದ್ರೆಗಳೂ ಮತ್ತು ಶಾಸನಗಳೂ ಆಗಿನ ಪ್ರಾಚೀನಾವಶೇಷಗಳ ಕಾಲಪರಿಮಿತಿಯನ್ನು ನಿರ್ಧರಿಸುವುದಕ್ಕೆ ಸಹಾಯವಾಗಿವೆ. ಕೆಲವು ಮಡಿಕೆ ಆಕಾರಗಳೂ, ಮಣ್ಣಿನ ಬೊಂಬೆಗಳೂ ಮತ್ತಿತರ ವಸ್ತುಗಳೂ ಅಲ್ಲಲ್ಲಿ ಸಿಕ್ಕರೂ, ಉತ್ತರಭಾರತೀಯ ಪ್ರಕಾಶಿಸುವ ಕಪ್ಪು ಮೃತ್ಪಾತ್ರೆಗಳಂತ ಯಾವ ನಿರ್ದಿಷ್ಟವಾದ ಕಾಲವನ್ನೂ ಸೂಚಿಸದೆ ಇರುವ ಕಾರಣ ಅವುಗಳನ್ನು ಹೆಚ್ಚಾಗಿ ಗಣನೆಗ ತರುವುದು ಅನವಶ್ಯಕ.

ಇಂತಹ ಕೆಲವು ಸ್ಥಳಗಳಲ್ಲಿ ಮಧ್ಯಕಾಲದ ಕೊನೆಯವರೆಗೂ ಸಂಸ್ಕೃತಿಗಳಿದ್ದುದು ಕಂಡು ಬಂದಿದೆ. ಗಾಜಿನಂತೆ ಹೊಳೆಯುವ ಮಣ್ಣಿನ ಪಾತ್ರೆಗಳು ಮಧ್ಯಕಾಲದ ಹೆಗ್ಗುರುತು.

## ೧೧

ಭೂಶೋಧನೆಗಳಿಂದ ವ್ಯಕ್ತವಾದ ಭಾರತ ಪುರಾತನ ಸಂಸ್ಕೃತಿಗಳ ಪರಿಚಯ ಮೇಲೆ ತಿಳಿಸಿದಂತಿದೆ. ಪುರಾತತ್ವದ ಪ್ರತಿ ವರ್ಷದ ಪ್ರಗತಿ ತಿಳಿಯಲು ಮೇಲಿನ ವಿಷಯಗಳು ಅಗತ್ಯ ಆದರೆ ವಾಚಕರಿಗೆ ಪ್ರಾಚೀನ ಸ್ಮಾರಕಗಳನ್ನು ಮತ್ತಿತರ ಭಾರತದ ಅವಶೇಷಗಳನ್ನು ತಿಳಿಸಲು ಪ್ರಯತ್ನಿಸಿಲ್ಲ ಏಕೆಂದರೆ ಅವುಗಳಿಗೆ ಪ್ರತ್ಯೇಕವಾದ ವಿವರಣೆ ಅಗತ್ಯವಾಗಿದೆ.



೬. ಮನೆಗಳು ಹಾಗೂ ಚರಂಡಿಗಳು, ಲೋಥಲ್.




೧೦. ಚಿತ್ರಿತ ಕಂದು ಮೃತ್ಪಾತ್ರೆಗಳು, ಹಸ್ತಿನಾಪುರ.

# 1958-59ರ ವರದಿ

## ಭೂ ಶೋಧನೆ

೧೯೫೮-೫೯ರಲ್ಲಿ ಭಾರತದಲ್ಲೆಲ್ಲಾ ಅನೇಕ ಪ್ರಾಚೀನ ಸ್ಥಳಗಳ ಭೂಶೋಧನೆ ಜರುಗಿತು.

೧

ಉತ್ನೂರ್.—ಆಂಧ್ರ ಪ್ರದೇಶದ ಪುರಾತತ್ವ ಇಲಾಖೆ, ಮಹಬೂಬ್‌ನಗರ ಜಿಲ್ಲೆಯ ಉತ್ನೂರ್‌ನಲ್ಲಿ ನೂತನ ಶಿಲಾಯುಗದ ವಸತಿಯನ್ನು ಕಂಡುಹಿಡಿಯಿತು. ಆ ವಸತಿಯ ಸುತ್ತಲೂ ಕಟ್ಟಿದ್ದ ಕಟ್ಟಿಗೆ ಬೇಲಿಗಳ ರಚನೆಯನ್ನು ಸೂಚಿಸುವ ಕಂಬ ನೆಡುವ ಗುಂಡಿಗಳ (post holes) ಸಾಲುಗಳು ದೊರೆತಿವೆ ಭೂಶೋಧನೆಯಲ್ಲಿ ಕಂಡುಬರುವ ಭಸ್ಮೀಭೂತ ಅವಶೇಷಗಳ ಸ್ತರಗಳಿಂದ ಈ ಪ್ರಾಚೀನ ವಸತಿಯು ಅನೇಕ ಸಾರಿ ಅಗ್ನಿಯಿಂದ ನಾಶವಾಯಿತೆಂದು ಧಾರಾಳವಾಗಿ ಹೇಳಬಹುದು. ಬ್ರಿಟಿಷ್ ಮ್ಯೂಸಿಯಂ ನಡೆಸಿದ ಇಲ್ಲಿನ ವೈಜ್ಞಾನಿಕ ಸಂಶೋಧನೆಯಿಂದ (C· 14 Test) ಆ ವಸತಿ ೪೧೨೦ ವರ್ಷಗಳಷ್ಟು ಪ್ರಾಚೀನವಾಗಿದೆಯೆಂದು ತಿಳಿದುಬಂದಿದೆ. ಈ ಕಾಲ ನಿರ್ಣಯದಲ್ಲಿ ೧೫೦ ವರ್ಷಗಳು ಹೆಚ್ಚುಕಡಿಮೆ ಇರಬಹುದು.

ಟಿ. ನರಸೀಪುರ.—ಮೈಸೂರು ಸಂಸ್ಥಾನದ ಪುರಾತತ್ವ ಇಲಾಖೆಯು ಮೈಸೂರು ಜಿಲ್ಲೆಯ ಟಿ. ನರಸೀಪುರದಲ್ಲಿ ಭೂಶೋಧನೆ ನಡೆಸಿದಾಗ ನೂತನ ಶಿಲಾಯುಗದ ವಸತಿಯನ್ನು ಸೂಚಿಸುವ ದಪ್ಪನಾದ ಕಂದು ಮೃತ್ಪಾತ್ರೆಗಳು (grey ware) ಮತ್ತು ಕಪಿಲ ವರ್ಣದ ಹಾಗೂ ತಿಳಿಗೆಂಪು ಬಣ್ಣದ ಮಣ್ಣಿನ ಪಾತ್ರೆಗಳೂ ಸಿಕ್ಕಿವೆ. ಕೆಲವು ವೇಳೆ ಕಂದು ಮೃತ್ಪಾತ್ರೆಗಳ ಮೇಲೆ ಚಿತ್ರಗಳು ಕೊರೆಯಲ್ಪಟ್ಟಿರುವುದಲ್ಲದೆ, ತಿಳಿಗೆಂಪು ಮಣ್ಣಿನ ಪಾತ್ರೆಗಳ ಮೇಲೆ ನೇರಳೆ ಬಣ್ಣದಲ್ಲಿ ಪತ್ರರೇಖೆಗಳಿಂದ ಚಿತ್ರಿಸಲಾಗಿದೆ. ಇವುಗಳಲ್ಲದೆ ಅಂಚಿನ ಮೇಲೆ ಕೆಮ್ಮಣ್ಣಿನಿಂದ ಚಿತ್ರಿಸಲ್ಪಟ್ಟ ಕಂದು ಮೃತ್ಪಾತ್ರೆಗಳು ಮೊದಲನೇ ಕೆಲವು ಸ್ತರಗಳಲ್ಲಿ ಕಂಡುಬಂದಿವೆ ಒಳಲೆಬಾಯಿ ಹೊಂದಿರುವ ಎರಡು ಮಣ್ಣು ಪಾತ್ರೆಗಳು, ನುಣುಪಾದ ಶಿಲಾ ಕೈಗೊಡಲಿಗಳೂ ಹಾಗೂ ಗುಂಡಕಲ್ಲುಗಳೂ ಯಥೇಚ್ಛವಾಗಿ ದೊರಕಿವೆ. ತಾಮ್ರವು ಉಪಯೋಗದಲ್ಲಿ ಇಲ್ಲದಿದ್ದರಿಂದ ಈ ವಸತಿಯು ನೂತನ ಶಿಲಾಯುಗಕ್ಕೆ ಸೇರಿರುವುದೇ ಹೊರತು ತಾಮ್ರ ಶಿಲಾಯುಗಕ್ಕೆ ಸೇರಿಲ್ಲ. ಒಂದು 'ಫ್ಲೂಟೆಡ್ ಕೋರ್' (fluted core) ಹೊರತು ಇನ್ನಾವ ಸೂಕ್ಷ್ಮ ಶಿಲಾಯುಗದ ವಸ್ತುಗಳೂ ಸಿಕ್ಕಿಲ್ಲ.

ಎರಡನೇ ಕಾಲಾವಧಿಯಲ್ಲಿ ಬೃಹತ್ ಶಿಲಾಗೋರಿಯಲ್ಲಿ ಕಪ್ಪು ಕೆಂಪು ಮಿಶ್ರಿತ ಮೃತ್ಪಾತ್ರೆಗಳು ಸಿಕ್ಕಿವೆ. ಒಂದು ಕಬ್ಬಿಣದ ಚಾಕೂ ಸಹ ಕಂಡುಬಂದಿದೆ.

ಲೋಥಲ್.—ಪುರಾತತ್ವ ಇಲಾಖೆಯ ಲೋಥಲ್ ಭೂಶೋಧನಾ ಯೋಜನೆ ಅಹಮದಾಬಾದ್ ಜಿಲ್ಲೆಯ ಪ್ರಖ್ಯಾತ ಹರಪ್ಪ ಸಂಸ್ಕೃತಿಯ ವಸತಿಯೊಂದಾದ ಲೋಥಲ್‌ನಲ್ಲಿ ಭೂಶೋಧನೆಯನ್ನು ಮುಂದುವರಿಸಿತು. ಶೋಧನೆ ನಡೆಸಿದ ಆವರಣದಲ್ಲಿ ಎರಡು ಉತ್ತರ-ದಕ್ಷಿಣ ರಸ್ತೆಗಳೂ, ಎರಡು ಪೂರ್ವ-ಪಶ್ಚಿಮ ರಸ್ತೆಗಳೂ, ಮತ್ತೆರಡು ಕಿರುಬೀದಿಗಳೂ, ಕಂಡುಬಂದಿವೆ. ರಸ್ತೆಯ ಒಂದು ಪಾರ್ಶ್ವದಲ್ಲಿ ಹನ್ನೆರಡು ಮನೆಗಳ ಬಚ್ಚಲುಗಳು ಸಾರ್ವಜನಿಕ ಚರಂಡಿಯೊಡನೆ ಸೇರಿಸಲ್ಪಟ್ಟಿವೆ. ನಗರ ನೈರ್ಮಲ್ಯ ವ್ಯವಸ್ಥೆಗಾಗಿ ಕೊಳಕು ನೀರು ಹೊರಟುಹೋಗುವಂತೆ ಮಡಿಕೆಗಳನ್ನು ಉಪಯೋಗಿಸುತ್ತಿದ್ದುದಲ್ಲದೇ ಮಲಪದಾರ್ಥಗಳ ಹೊಂಡಗಳೂ ಇದ್ದವು.

ಪೂರ್ವ-ಪಶ್ಚಿಮ ೭೧೦ ಅಡಿ, ಉತ್ತರ--ದಕ್ಷಿಣ ೧೨೦ ಅಡಿ ಉದ್ದವಾಗಿರುವ ಸ ಇಟ್ಟಿಗೆಯ ಕಟ್ಟಡವು ನಾವಾಶ್ರಯ (dockyard) ಆಗಿತ್ತೆಂದು ಕಂಡುಬಂದಿದೆ. ಹಡಗ ಪೂರ್ವ ದಿಕ್ಕಿನ ಪ್ರವೇಶ ದ್ವಾರದ ಮೂಲಕವಾಗಿ ಸಮುದ್ರದ ಕಡೆಯಿಂದ ಲೋಥಲ್ ಬಂ ಬರುತ್ತಿದ್ದವು. ಅವಶ್ಯಕ ಬಂದಲ್ಲಿ ನೀರಿನ ಮಟ್ಟವನ್ನು ಏರಿಸಲು ಅಥವಾ ಇಳಿಸಲು ದಕ್ಷಿ ಗೋಡೆಗೆ ಸೇರಿಕೊಂಡಿರುವ ಕಾಲುವೆಯಲ್ಲಿ ಬಾಗಿಲು ಕೂಡಇದೆ.

ಲೋಥಲ್ ನಗರದ ಐದು ಸ್ವರೂಪಗಳಲ್ಲಿ(phases) ಮೊದಲನೆ ನಾಲ್ಕು ಪ್ರೌಢ ಹರಪ್ಪ ಸಂಸ್ಕೃತಿಗೂ, ಕೊನೆಯದೊಂದು ಹರಪ್ಪ ಸಂಸ್ಕೃತಿಯ ಅಂತ್ಯ ಸ್ವರೂಪಕ್ಕೂ ಸೇರಿವೆ. ನಗ ರಚನೆಯು ಅಂತ್ಯ ಸ್ವರೂಪದಲ್ಲಿ ಮೊದಲಿನಷ್ಟು ವಿಶಾಲವಾಗಿರಲಿಲ್ಲ. ಹರಪ್ಪ ಸಂಸ್ಕೃತಿಯ ಅಂತ್ಯ ಸ್ವರೂಪದಲ್ಲಿ ಉಪಯೋಗದಲ್ಲಿದ್ದ ಹೊಸ ಆಕಾರಗಳು ಪ್ರೌಢ ಹರಪ್ಪ ಸಂಸ್ಕೃತಿಯ ಮಣ್ಣಿನ ಪಾತ್ರೆಗಳ ರೂಪದಿಂದಲೇ ಬದಲಾವಣೆ ಹೊಂದಿದ್ದವು ಹರಪ್ಪ ಸಂಸ್ಕೃತಿಯನ್ನು ಸೂಚಿಸುವ ಕೆಲಸವು ಮಡಿಕೆಗಳು ಮತ್ತಿತರ ವಸ್ತುಗಳು ಈ ಸಂಸ್ಕೃತಿಯ ಕ್ಷೀಣ ದೆಸೆಯಲ್ಲಿಯೂ ಉಪಯೋಗದಲ್ಲಿದ್ದವು.

ಈ ಸಂಸ್ಕೃತಿಯ ಆರಂಭದ ಹಾಗೂ ಅಂತ್ಯ ಸ್ವರೂಪಗಳಿಗೆ ಸೇರಿದ ಹತ್ತು ಸಮಾಧಿ ಗಳನ್ನು ಲೋಥಲ್ ಸ್ಮಶಾನದಲ್ಲಿ ಕಂಡುಹಿಡಿಯಲಾಯಿತು. ಸಂಸ್ಕೃತಿಯ ಪ್ರಾರಂಭ ಸ್ವರೂಪಕ್ಕೆ ಸೇರಿದ ಮೂರು ಸಮಾಧಿಗಳೊಂದೊಂದರಲ್ಲಿಯೂ ಎರಡು ಶವಗಳು ಒಂದರಪಕ್ಕದಲ್ಲೊಂದ ಇಟ್ಟಿರುವುದು ಕಂಡುಬಂದಿವೆ. ಕೂಲಂಕಷವಾಗಿ ಪರಿಶೀಲನೆ ಮಾಡಿದ್ದರ ಫಲವಾಗಿ, ಮೇಲೆ ಹೇಳಿದ ಪ್ರತಿಯೊಂದು ಸಮಾಧಿಯಲ್ಲೂ ಒಂದು ಅಸ್ಥಿಪಂಜರವು ಪುರುಷನದು ಮತ್ತೊಂದ ಸ್ತ್ರೀಯದೆಂದು ತಿಳಿದುಬಂದಲ್ಲಿ, ಸತಿ ಪದ್ಧತಿಯನ್ನು ಹೋಲುವ ಪದ್ಧತಿಯು ಆಗಿನ ಕಾಲದಲ್ಲೂ ಜಾರಿಯಲ್ಲಿತ್ತೆಂದು ಹೇಳಬಹುದು. ಅಲ್ಲಿ ಸಿಕ್ಕಿರುವ ಇತರ ವಸ್ತುಗಳ ಪೈಕಿ ಹುಲಿ ಮೊದಲಾದ ಪ್ರಾಣಿ ಆಕೃತಿಗಳನ್ನು ಕೆತ್ತಿರುವ ಆರು ಮುದ್ರೆಗಳೂ ಮಣ್ಣಿನ ಒಂದು ಮುದ್ರಾ ಛಾಪವ ಮುಖ್ಯವಾದವು. ಮುದ್ರಾ ಛಾಪದ ಮೇಲೆ ಕೆತ್ತಿರುವ ವಿಚಿತ್ರವಾದ ಒಂದು ಪ್ರಾಣಿಗೆ ಆನೆಯ ಸೊಂಡಿಲು,ಹೋರಿಯ ಶೃಂಗಗಳೂ, ಸರ್ಪದಂತೆ ತೋರುವ ನೆಟ್ಟಗೆ ನಿಂತ ಬಾಲ ಇವೆ. ಕೆಂಪು ಮೃತ್ಪಾತ್ರೆಗಳ ಮೇಲೆ ಕಪ್ಪು ಬಣ್ಣದಲ್ಲಿಯೂ, ಕೆಂಪು ಮತ್ತು ಬೂದು ಬಣ್ಣಗಳ ಮೇಲೆ ನೇರಳೆ ಬಣ್ಣದಲ್ಲಿಯೂ ಚಿತ್ರಿಸಲಾಗಿದೆ. ಬಕ, ಸಾರಂಗ, ಗುಬ್ಬಿ, ನವಿಲು, ಹಾವುಗಳೂ ಹಾಗೂ ಕೊಕ್ಕಿನಲ್ಲಿ ಮೀನು ಕಚ್ಚಿಕೊಂಡಿರುವ ಪಕ್ಷಿಗಳು ಅನೇಕ ಸಾರಿ ಚಿತ್ರಿಸಲಾಗಿವೆ.

ರೋಜಿಡಿ —ಮಧ್ಯ ಸೌರಾಷ್ಟ್ರ ಜಿಲ್ಲೆಯಲ್ಲಿರುವ ಹರಪ್ಪ ಸಂಸ್ಕೃತಿಯ ಅಂತ್ಯ ಸ್ವರೂಪದ ವಸತಿಯಾದ ರೋಜಿಡಿ ಎಂಬಲ್ಲಿ ಮುಂಬೈ ಸರ್ಕಾರದ ಪುರಾತತ್ವ ಇಲಾಖೆ, ಭೂಶೋಧನೆಯನ್ನು ಮುಂದುವರಿಸಿತು. ಈ ವಸತಿಯಲ್ಲಿ ಮೂರು ಸ್ವರೂಪಗಳಿವೆ. ಮೊದಲನೇ ಸ್ವರೂಪದಲ್ಲಿ (Phase ಮಣ್ಣು ಗೋಡೆ ಹಾಗೂ ಹಸಿ ಇಟ್ಟಿಗೆಯ ಮನೆಗಳನ್ನೂ ಚಿಕ್ಕದಾದ ಜಗುಲಿಯ ಮೇಲೆ ಕಟ್ಟಲಾಗುತ್ತಿತ್ತು. ನುಣುಪಾದ ಮಣ್ಣಿನಿಂದ ತಯಾರಿಸಿದ ಪಾತ್ರೆಗಳು ಚೆನ್ನಾಗಿ ಸುಡಲ ಟ್ಟಿದ್ದುವು. ಕೆಂಪು ಅಥವಾ ನೇಗಲೇ ಬಣ್ಣದ ಮೃತ್ಪಾತ್ರೆಗಳ ಮೇಲೆ ಕಪ್ಪು ರೇಖೆಗಳ ಹೊರತ ಬೇರೆ ಚಿತ್ರಗಳು ಕಂಡುಬರುವುದಿಲ್ಲ. ಚರ್ಟ್ ಕಲ್ಲಿನ ಹಾಗೂ ತಾಮ್ರದ ಸಣ್ಣ ಆಯುಧಗಳು, ಚಿನ್ನದ ಉಂಗುರ, ತಾಮ್ರದ ಬಳೆಗಳೂ, ಕಾರ್ನಿಲಿಯನ್ (carnelian) ಫಯಾನ್ಸ್ (faience) ಮತ್ತು ಮಣ್ಣಿನ ಮಣಿಗಳು ಸಿಕ್ಕಿವೆ. ಎರಡನೇ ಸ್ವರೂಪದಲ್ಲಿ ಕೆಲವು ಮೃತ್ಪಾತ್ರೆಗಳ ಮೇಲೆ ಕಪ್ಪು ಬಣ್ಣದಿಂದಲೂ, ಬೂದು ಪಾತ್ರೆಗಳ ಮೇಲೆ ನೇರಳೆ ಬಣ್ಣದಿಂದಲೂ ಚಿತ್ರಿಸಿರುವುದು ಕಂಡುಬರುತ್ತೆ. ಮನೆಗಳಲ್ಲಿ ಸುಣ್ಣದ ಗಾರೆ, ಕಲ್ಲಿನ ಗೋಡೆ ಮತ್ತು ಮಣ್ಣಿನ ನೆಲವನ್ನು ನೋಡಬಹುದು. ಪ್ರಭಾಸ್ ಪಟ್ಟಣದ ಎರಡನೇ ಸಾಂಸ್ಕೃತಿಕ ಕಲಾವಧಿಯ ಮೃತ್ಪಾತ್ರೆಗಳು ಇಲ್ಲಿ ಸಿಕ್ಕುತ್ತವೆ.

ಆಲಂಗೀರ್ ಪುರ--ದೆಹಲಿಯಿಂದ ಈಶಾನ್ಯಕ್ಕೆ ೨೮ ಮೈಲಿ ದೂರದಲ್ಲಿ ಮೀರತ್ ಜಿಲ್ಲೆಯ ಆಲಂಗೀರ್ ಪುರದಲ್ಲಿ ಹರಪ್ಪ ಸಂಸ್ಕೃತಿಯ ವಸತಿಯೊಂದು ಬೆಳಕಿಗೆ ಬಂದಿದೆ. ಇದು ಯಮುನಾ ಉಪನದಿಯಾದ ಹಿಂಡನ್ ದಡದ ಮೇಲಿದೆ. ಭೂಶೋಧನೆಯಲ್ಲಿ ತೋರಿದ್ದ ನಾಲ್ಕು ಸಾಂಸ್ಕೃತಿಕ ಕಾಲಾವಧಿಗಳಲ್ಲಿ (Periods) ಮೊಟ್ಟಮೊದಲನೆಯದು ಹರಪ್ಪ ಸಂಸ್ಕೃತಿಗೆ ಸೇರಿದ್ದಾಗಿದೆ. ಇದರಲ್ಲಿ ಯಾವ ಕಟ್ಟಡಗಳೂ ಕಂಡುಬಂದಿಲ್ಲ. ಸುಟ್ಟ ಇಟ್ಟಿಗೆಗಳೂ, ಅರ್ಧ ಚತುರ ಸ್ರಾಕಾರದ ಹೆಂಚುಗಳು ಮಾತ್ರ ಸಿಕ್ಕಿವೆ. ಹರಪ್ಪ ಸಂಸ್ಕೃತಿ ಸೂಚಿಸುವ ಮೃತ್ಪಾತ್ರೆಗಳಲ್ಲಿ ಪೀಠವುಳ್ಳ ಹರಿವಾಣ (dish-on-stand), ಗಿಂಡಿ (goblet), ಚೂಪಾದ ಬುಡವುಳ್ಳ ದೊಡ್ಡ ಚಂಬು (beaker with pointed base) ಮೊದಲಾದವುಗಳಿವೆ. ಮಣ್ಣಿನ ಪಾತ್ರೆಗಳ ಮೇಲೆ ದಪ್ಪವಾದ ಪಟ್ಟಿ, ತ್ರಿಕೋಣ, ಚತುರಸ್ರ, ಪರಸ್ಪರವಾಗಿ ಛೇದಿಸುವ ವೃತ್ತ, ಸಸ್ಯ ಮತ್ತು ನವಿಲುಗಳ ಆಕೃತಿಗಳು ಚಿತ್ರಿಸಲ್ಪಟ್ಟಿವೆ. ಕೆಲವು ಮಣ್ಣಿನ ತೊಟ್ಟಿಗಳ ಮೇಲೆ ಸಂಕೇತಗಳು ಕೊರೆಯಲ್ಪಟ್ಟಿರುವುದಲ್ಲದೆ, ಬಟ್ಟೆಯ ಗುರುತು ಕೂಡ ಇದೆ. ಮಣ್ಣಿನ ಗೊಂಬೆಗಳಲ್ಲಿ, ಕರಡಿ, ಭುಜವುಳ್ಳ ಹೋರಿ ಹಾಗೂ ಸರ್ಪ ಮುಖ್ಯವಾದವು. ಇತರ ಮಣ್ಣಿನ ವಸ್ತುಗಳಲ್ಲಿ ತ್ರಿಕೋಣಾಕಾರದ ಗಟ್ಟಿಗಳೂ, ಆಟದ ಗಾಡಿ, ದಾಳ, ಫಾಯನ್ಸ್ ಬಳೆಗಳು, ಬಳಪದ ಮತ್ತು ಅಮೌಲ್ಯ ಕಲ್ಲುಗಳ ಮಣಿಗಳು, ತಾಮ್ರ ಅಥವಾ ಕಂಚಿನ ಅಲಗು ಮತ್ತು ಸೂಜಿ ಸಿಕ್ಕಿವೆ.

ಹರಪ್ಪನ್ನರು ಈ ವಸತಿಯನ್ನು ತ್ಯಜಿಸಿದ ನಂತರ ಚಿತ್ರಿತ ಕಂದು ಮೃತ್ಪಾತ್ರೆಗಳನ್ನುಪಯೋಗಿಸುವ ಜನರು ವಾಸಿಸಲು ಪ್ರಾರಂಭಿಸಿದರು. ಆ ಕಾಲದಲ್ಲಿ ಕಪ್ಪಾದ ಹೊಳಪಿನ (black polished ware) ಹಾಗೂ ಕಪ್ಪುಕೆಂಪು ಮಿಶ್ರಿತವಾದ ಚಿತ್ರಿಸಿದ ಮತ್ತು ಕೆಂಪು ಮಣ್ಣಿನ ಪಾತ್ರೆಗಳು ಉಪಯೋಗದಲ್ಲಿದ್ದವು. ಎರಡು ಚಿತ್ರಿಸಿದ ಮಣ್ಣಿನ ಪ್ರಾಣಿಯಾಕೃತಿಯ ಗೊಂಬೆಗಳೂ, ಮೂಳೆಯಿಂದ ಮಾಡಿರುವ ದಾಳ, ಲೇಖನಿ, ಸೂಜಿ, ಬಾಣದ ಮೊನೆ, ಇವೇ ಮೊದಲಾದವುಗಳೂ, ಕರಿ ಜಾಸ್ಪರ್ (Jasper) ಕಲ್ಲಿನಿಂದಲೂ, ಹದಮಾಡಿದ ಮಣ್ಣಿನ ಮತ್ತು ಮೂಳೆಯಿಂದಲೂ ತಯಾರಿಸಿದ ಸಣ್ಣ ಬಿಲ್ಲೆಗಳೂ ಹಾಗೂ ಗಾಜಿನ ಮಣಿಗಳೂ ಸಿಕ್ಕಿವೆ. ಕಬ್ಬಿಣ ಮತ್ತು ತಾಮ್ರ ಈ ಸಂಸ್ಕೃತಿಯಲ್ಲಿ ಪ್ರಾರಂಭದಿಂದ ಅಂತ್ಯದವರೆಗೂ ಉಪಯೋಗದಲ್ಲಿದ್ದವು. ಮಣ್ಣುಮುದ್ದೆ ಮೇಲೆ ಕಡ್ಡಿ ಗುರುತು ಕಂಡು ಬರುವುದರಿಂದ ಮನೆಗಳನ್ನು ಕಡ್ಡಿಗಳಿಂದ ಕಟ್ಟಿ ದಪ್ಪವಾಗಿ ಮಣ್ಣಿನ ಗಾರೆ ಮಾಡುತ್ತಿದ್ದರೆಂದು ಸೂಚಿಸುತ್ತದೆ.

ಇತರ ಪ್ರಾಚೀನ ಸ್ಥಳಗಳಲ್ಲಿ ಉತ್ತರದ ಪ್ರಕಾಶಿಸುವ ಕಪ್ಪು ಮೃತ್ಪಾತ್ರೆಗಳೊಂದಿಗೆ ಸಿಗುವ ಮಡಿಕೆಗಳು ಆಲಂಗೀರ್‌ಪುರದ ಮೂರನೇ ಕಾಲಾವಧಿಯಲ್ಲಿ ಸಿಕ್ಕಿದರೂ ಪ್ರಕಾಶಿಸುವ ಕಪ್ಪು ಮೃತ್ಪಾತ್ರೆಗಳು ಅಲ್ಲಿ ಸಿಕ್ಕುವುದಿಲ್ಲ.

ಮೇಲೆ ತಿಳಿಸಿದ ವಿವರಣೆಯ ತಾತ್ಪರ್ಯವೇನೆಂದರೆ, ಆಲಂಗೀರ್ ಪುರದ ನಾಲ್ಕು ಕಾಲಾವಧಿಗಳು ಕ್ರಮವಾಗಿ ಹರಪ್ಪ ಸಂಸ್ಕೃತಿ, ಚಿತ್ರಿತ ಕಂದು ಮೃತ್ಪಾತ್ರಾ ಸಂಸ್ಕೃತಿ, ಆದ್ಯ ಇತಿಹಾಸ ಹಾಗೂ ಮಧ್ಯಕಾಲದ ಅಂತ್ಯ ಸ್ವರೂಪಗಳನ್ನು ಸೂಚಿಸುತ್ತವೆ.

೨

ನವದಾ ತೋಲಿ—ಹಿಂದೆ ನಡೆಸಿದ ಕೆಲಸವನ್ನು ಮುಂದುವರಿಸುತ್ತಾ ಪೂನಾ ಡೆಕ್ಕನ್ ಕಾಲೇಜ್ ಪೋಸ್ಟ್ ಗ್ರಾಜುಯೇಟ್ ಅಂಡ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಮಧ್ಯಪ್ರದೇಶದ ಸರ್ಕಾರ ಮತ್ತು ಬರೋಡ ವಿಶ್ವವಿದ್ಯಾಲಯಗಳೊಡನೆ ಸಹಕರಿಸಿ ಪಶ್ಚಿಮ ನಿಮಾರ್ ಜಿಲ್ಲೆಯಲ್ಲಿ ನರ್ಮದಾ ನದೀ ತೀರದಲ್ಲಿರುವ ನವದಾ ತೋಲಿ ಎಂಬ ತಾಮ್ರ ಶಿಲಾಯುಗದ ಸ್ಥಳದಲ್ಲಿ ಭೂಶೋಧನೆಯನ್ನು ನಡೆಸಿತು. ಈ ಗ್ರಾಮ್ಯ ವಸತಿಯು ಕನಿಷ್ಠ ಪಕ್ಷ ಹತ್ತು ಸಾರಿ ಯಾದರೂ

ಪುನರ್ರಚನೆ ಮಾಡಲ್ಪಟ್ಟಿತ್ತು. ಅಲ್ಲಿಯ ಸಂಸ್ಕೃತಿಯನ್ನು ನಾಲ್ಕು ಸ್ವರೂಪ ಗಳಾ ವಿಂಗಡಿಸಬಹುದು. ಮನೆಗಳು ವೃತ್ತಾಕಾರವಾಗಿಯೂ, ಚತುರಪ್ರಾಕಾರ ವಾಗಿಯ ಇದ್ದುವು. ಮೊದಲನೇ ಮತ್ತು ಎರಡನೇ ಸಾಂಸ್ಕೃತಿಕ ಸ್ವರೂಪದಲ್ಲಿ ಮನೆ ಗೋಡೆ ಸುಣ್ಣದ ಗಾರೆ ಉಪಯೋಗಿಸಲಾಗಿತ್ತು. ಸೊಗಸಾಗಿ ಅಗೆಯಲ್ಪಟ್ಟ ಹಾಗೂ ಇಳಿಜಾರಾ ಪಾರ್ಶ್ವಗಳನ್ನುಳ್ಳ ವಿಶಾಲವಾದ ಗುಂಡಿಯೊಂದು ಮೊದಲನೇ ಸ್ವರೂಪದಲ್ಲಿ ಕಂಡುಬಂದಿದ ಅದರ ಸುತ್ತಲು ಕಂಬವನ್ನು ಹೂಳುವ ಗುಂಡಿಗಳಿರುವುದಲ್ಲದೆ ಸಮಾನಾಂತರ ಕೋಣದಲ್ಲಿಟ್ಟಿರು ಎರಡು ಮರದ ದಿಮ್ಮಿಗಳು ಮತ್ತು ಎರಡು ವಿಚಿತ್ರವಾದ ಮಣ್ಣಿನ ಪಾತ್ರೆಗಳೂ ಗೋಚರವಾಗಿ

ಸುಟ್ಟುಹೋದ ಮರದ ಕಂಬಗಳ ಅವಶೇಷಗಳಿಂದ ಮೂರನೇ ಸಾಂಸ್ಕೃತಿಕ ಸ್ವರೂಪಕ ಸೇರಿದ ಮನೆಗಳ ರಚನೆಯನ್ನು ತಿಳಿಯಬಹುದು. ಸಾಧಾರಣವಾಗಿ ಕೊಠಡಿಗಳು ಹತ್ತು ಅ ಉದ್ದ, ಏಳು ಅಡಿ ಅಗಲವಾಗಿವೆ. ಮನೆಗಳ ಗೋಡೆ ಮತ್ತು ಮೇಲ್ಛಾವಣಿಗಳು ಬಿದಿರ ಚಾಪೆಗಳಿಂದ ಮಾಡಲ್ಪಟ್ಟು ಮಣ್ಣಿನ ಗಾರೆ ಮೇಲೆ ಸುಣ್ಣ ಹಚ್ಚಲಾಗಿದೆ.

ಸಾವಿರಾರು ಬೆಣಚುಕಲ್ಲಿನ (Chalcedony) ಅಲಗುಗಳೂ ಮತ್ತು ಕೆಲವು ತಾಮ್ರ ವಸ್ತುಗಳೂ ಸಿಕ್ಕಿವೆ. ಮಧ್ಯೆ ಬೆನ್ನು ಹುರಿ (mid rib) ಯುಳ್ಳ ತಾಮ್ರದ ಕತ್ತಿಯ ಚೂರೊಂದು ಇರಾನಿನಲ್ಲಿ ಸಿಕ್ಕುವ ಕತ್ತಿಗಳನ್ನು ಹೋಲುತ್ತದೆ.

ಮಾಳ್ವಾದ ಮಣ್ಣು ಪಾತ್ರೆಗಳು (Malw Ware) ಎಂದು ಹೇಳಲ್ಪಡುವ ತಿಳಿಗೆಂಪಿನ ಮೇಲೆ ಕಪ್ಪಿನಲ್ಲಿ ಚಿತ್ರಿಸಲ್ಪಟ್ಟಿರುವ ಮೃತ್ಪಾತ್ರೆಗಳು ಎಲ್ಲಾ ಸ್ವರೂಪಗಳಲ್ಲಿಯೂ ಉಪಯೋಗ ದಲ್ಲಿದ್ದುವು. ಮಾಳ್ವಾ ಪಾತ್ರೆಯ ಎಲ್ಲಾ ಆಕೃತಿಗಳೂ ಪ್ರಾರಂಭದಿಂದ ಕೊನೆಯವರೆಗೂ ಉಪಯೋಗದಲ್ಲಿದ್ದವು. ರಾಜಸ್ಥಾನದಲ್ಲಿರುವ 'ಅಹಾಡ್'ನಲ್ಲಿ ದೊರಕುವಂಥ ಬಿ ಬಣ್ಣದಿಂದ ಚಿತ್ರಿತವಾದ ಕಪ್ಪು ಮಿಶ್ರಿತ ಕೆಂಪು ಪಾತ್ರೆಗಳು ಇಲ್ಲಿಯೂ ಮೊದಲನೇ ಸ್ವರೂಪದಲ್ಲ ಯಥೇಚ್ಛವಾಗಿ ಸಿಕ್ಕುತ್ತವೆ. ಇದೇ ಕಾಲದಲ್ಲಿ ಇವುಗಳ ಮೇಲೆ ಬಿಳೀ ಬಣ್ಣದಲ್ಲಿ ಚಿತ್ರಿಸಲಾದ ಓಡುತ್ತಿರುವ ಜಿಂಕೆಗಳನ್ನು, ನೃತ್ಯ ಭಂಗಿಯಲ್ಲಿರುವ ಮನುಷ್ಯಾಕೃತಿಗಳನ್ನು ಕಾಣಬಹುದು.

ಮೊಲನೇ ಸ್ವರೂಪವು ಕ್ರಿ.ಪೂ. ಹದಿನಾರು–ಹದಿನೇಳನೇ ಶತಮಾನಕ್ಕೆ ಸೇರಿದ್ದೆಂದೂ ನಾಲ್ಕನೇ ಸ್ವರೂಪವು ಹನ್ನೆರಡು ಹದಿಮೂರನೇ ಸ್ವರೂಪಕ್ಕೆ ಸೇರಿದ್ದೆಂದೂ ಕೆಲವು ವಸ್ತುಗಳ "ಕಾರ್ಬನ್–೧೪" ಎಂಬ ವೈಜ್ಞಾನಿಕ ಸಂಶೋಧನಾ ಪರಿಣಾಮವಾಗಿ ತಿಳಿದುಬಂದಿದೆ.

೩

ದೈಮಾಬಾದ್—ಗೋದಾವರಿ ಉಪನದಿ ಪ್ರವರದ ತೀರದ ಮೇಲೆ ಅಹ್ಮದ್ ನಗರ್ ಜಿಲ್ಲೆಯಲ್ಲಿರುವ ತಾಮ್ರ ಶಿಲಾಯುಗದ ಸ್ಥಳವಾದ ದೈಮಾಬಾದ್ ಎಂಬಲ್ಲಿ ಈ ವರ್ಷ ಭೂ ಶೋಧನನಡೆಯಿತು. ಅಲ್ಲಿ ಮೂರು ಸ್ವರೂಪಗಳು ಕಂಡುಬಂದವು. ಮೊದಲನೇ ಸ್ವರೂಪದ ಮೃತ್ಪಾತ್ರೆಗಳು ಬ್ರಹ್ಮಗಿರಿ ಮೊದಲನೇ ಸಾಂಸ್ಕೃತಿಕ ಕಾಲಾವಧಿಯಲ್ಲಿ ದೊರೆತ ದಪ್ಪನಾದ ಕಂದು ಪಾತ್ರೆಗಳಂತಿವೆ. ಕರೀ ಬಣ್ಣದಿಂದ ಚಿತ್ರಿಸಿದ ಕೆಂಪು ಮೃತ್ಪಾತ್ರೆಗಳು ಕೂಡ ಸ್ವಲ್ಪ ಮಟ್ಟಿಗೆ ಕಂಡುಬಂದಿವೆ. ಅವುಗಳಲ್ಲೊಂದು ದೊಡ್ಡ ಮಡಿಕೆ ಮೇಲೆ ಅರಣ್ಯ ದೃಶ್ಯ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಒಬ್ಬ ಮನುಷನ ಹತ್ತಿರ ಚಕಿತವಾದ ಎರಡು ಜಿಂಕೆಗಳು ಓಡಿಬರುತ್ತಿರುವುದನ್ನೂ ಮಧ್ಯೆ ನವಿಲೊಂದನ್ನೂ ನೋಡಬಹುದು. ಕೆಳಭಾಗದಲ್ಲಿ ಬೇರೊಂದು ಕಡೆಗೆ ಮೂ ಹುಲಿಗಳು ಓಡಿಹೋಗುತ್ತಿರುವುದು ಚಿತ್ರಿತವಾಗಿದೆ. ಎರಡನೆ ಸ್ವರೂಪದಲ್ಲಿ ಕರೀ ಬಣ್ಣದಿಂದ ಚಿತ್ರಿತವಾದ ಕೆಂಪು ಮೃತ್ಪಾತ್ರೆಗಳು ಉಪಯೋಗದಲ್ಲಿದ್ದವು. ನರ್ಮದಾ–ಗೋದಾವರಿ ಪ್ರದೇಶದಲ್ಲಿ ತಾಮ್ರಶಿಲಾಯುಗದ ಸ್ಥಳಗಳಲ್ಲಿ ದೊರಕುವಂಥ ಮಣ್ಣಿನ ಒಳಲೇ ಬಾಯಿ

ಯಾಕಾರದ ಪಾತ್ರೆ ಇಲ್ಲಿಯೂ ಸಿಕ್ಕುತ್ತದೆ. ಮೂರನೇ ಸ್ವರೂಪದಲ್ಲಿ ಜೋರ್ವೆ ಮೃತ್ಪಾತ್ರೆಗಳು ಕಂಡುಬಂದಿವೆ.

ಸೂಕ್ಷ್ಮ ಶಿಲಾಯುಧಗಳು ಎಲ್ಲಾ ಸ್ವರೂಪಗಳಲ್ಲಿಯೂ, ತಾಮ್ರವು ಎರಡು ಮತ್ತು ಮೂರನೇ ಸ್ವರೂಪಗಳಲ್ಲಿ ಮಾತ್ರ ಗೋಚರವಾಗಿವೆ. ಅನೇಕ ನೂತನ ಶಿಲಾಯುಧಗಳು ಭೂಮಿಯಮೇಲೆಯೇ ಸಿಗುತ್ತವೆ.

ಎಲ್ಲಾ ಸ್ವರೂಪಗಳಲ್ಲಿಯೂ ಚಾಚಿದ ಶವಗಳನ್ನುಳ್ಳ ಸಮಾಧಿಗಳು ಕಂಡುಬಂದಿವೆ. ಜನರು ಶಿಶುಗಳನ್ನು ಮಡಿಕೆಗಳಲ್ಲಿ ಹೂಳುತ್ತಿದ್ದರು. ಒಂದಕ್ಕೊಂದು ಬಾಯಿ ಸೇರಿರುವಂತೆ ಇಡಲ್ಪಟ್ಟ ಎರಡು ಮಡಿಕೆಗಳಲ್ಲಿ ಅಸ್ಥಿಯನ್ನು ಇಡಲಾಗುತ್ತಿತ್ತು. ಕೆಲವು ವೇಳೆ ಮೂರನೇ ಮಡಿಕೆಯನ್ನೂ ನೋಡಬಹುದು.

ಛ

ವೈಶಾಲಿ—ಪಾಟ್ನಾ ಕಾಶಿಪ್ರಸಾದ್ ಜಯಸ್ವಾಲ್ ರಿಸರ್ಚ ಇನ್‌ಸ್ಟಿಟ್ಯೂಟ್ ಮುಜಫರ್‌ಪುರ್ ಜಿಲ್ಲೆಯಲ್ಲಿ ಪ್ರಾಚೀನ ವೈಶಾಲಿ ನಗರವಾದ ರಾಜಾವಿಶಾಲ್–ಕಾ–ಗಢ್ ಎಂಬ ಸ್ಥಳದಲ್ಲಿ ಭೂಶೋಧನೆ ನಡೆಸಿತು.

ಮೂರು ಕಾಲಾವಧಿಗಳಿಗೆ ಸೇರಿದ ಕೋಟೆಯು ನಗರವನ್ನು ಆವರಿಸಿದೆ. ಪ್ರಪ್ರಥಮ ಕೋಟೆ, ಉತ್ತರದ ಪ್ರಕಾಶಿತ ಕರೀ ಮೃತ್ಪಾತ್ರೆಗಳು ಸಿಕ್ಕುವ ಭಗ್ನಾವಶೇಷಗಳ ಮೇಲೆ ಕಟ್ಟಲ್ಪಟ್ಟಿದೆ. ಎರಡನೇ ಸಾಂಸ್ಕೃತಿಕ ಕಾಲಾವಧಿಯಲ್ಲಿ ಸುತ್ತಲೂ ಆಳವಾದ ಕಂದಕವನ್ನು ತೋಡಿ ದೊರೆತ ಮಣ್ಣಿನರಾಶಿಯಿಂದ ಕೋಟೆ ಕಟ್ಟಿದ್ದರು. ಮೂರನೇ ಕಾಲಾವಧಿಯಲ್ಲಿ ದಂಡಿನ ಸಾಲುಮನೆಗಳನ್ನೂ ಇಟ್ಟಿಗೆಯ ಕೋಟೆಯನ್ನೂ ಕಟ್ಟಿದ್ದರು. ಭೂಶೋಧನೆಯಲ್ಲಿ ದೊರತ ಅವಶೇಷಗಳ ಆಧಾರದ ಮೇಲೆ ಈ ಕೋಟೆ ಕೊತ್ತಲಗಳು ಶುಂಗರ ಕಾಲದಿಂದ ಪ್ರಾರಂಭಿಸಿ ಗುಪ್ತರ ಕಾಲದವರೆಗೆ ಉಪಯೋಗದಲ್ಲಿದ್ದವೆಂದು ಹೇಳಬಹುದು.

ನಗರದ ಒಳಭಾಗದಲ್ಲಿರುವ ಇಟ್ಟಿಗೆ ಕಟ್ಟಡಗಳು ಮೇಲೆ ಹೇಳಿದ ಕೋಟೆ–ಕೊತ್ತಲಗಳ ಕಾಲಗಳಿಗೆ ಸೇರಿವೆ. ಒಂದು ಕಂದಕದಲ್ಲಿ ದೊರೆತ ಸಣ್ಣ ಕುಡಿಕೆಯಲ್ಲಿ ಚಿನ್ನದ ಕಿವಿ ಆಭರಣಗಳು, ಜಡೆ ಪಿನ್ನು, ಸಂಧಿ ಮತ್ತು ಮಥುರಾ–ಕುಷಾಣ ರ ಶೈಲಿಯಲ್ಲಿ ನಿಂತಿರುವ ವಿಗ್ರಹ ಸಿಕ್ಕಿವೆ. ಸಮೀಪದಲ್ಲಿದ್ದ ಬೇರೊಂದು ಕುಡಿಕೆಯಲ್ಲಿ ಬೆಳ್ಳಿ ತಾಯತ ಮತ್ತು ಅಮೂಲ್ಯ ಕಲ್ಲುಗಳ ಮಣಿಗಳು ಕಂಡುಬಂದಿವೆ.

ಕೌಶಾಂಬಿ—ಅಲಹಾಬಾದ್ ವಿಶ್ವವಿದ್ಯಾಲಯವು ಅದೇ ಜಿಲ್ಲೆಯಲ್ಲಿ ಯಮುನಾ ನದಿ ತೀರದ ಮೇಲಿರುವ ಕೌಶಾಂಬಿಯಲ್ಲಿ ಪ್ರಾಚೀನ ಕೋಟೆಯ ಸಂಶೋಧನೆಯನ್ನು ಮುಂದೊರೆಯಿಸಿತು. ಈ ಕೋಟೆಗಳು ಐದು ಕಾಲಾವಧಿಗಳಿಗೆ ಸೇರಿವೆ. ಮೊದಲನೆ ಕೋಟೆಯು ಮನೆಗಳ ಭಗ್ನಾವಶೇಷಗಳ ಮೇಲೆ ಕಟ್ಟಲ್ಪಟ್ಟಿತ್ತು.

ಪ್ರಥಮ ಕಾಲಾವಧಿಯ ಕೋಟೆಯು ಆರು ಬಾರಿಯೂ, ಎರಡನೇ ಕಾಲಾವಧಿಯ ಕೋಟೆ ನಾಲ್ಕು ಬಾರಿಯೂ ಪುನರ್ರಚಿತವಾಗಿದ್ದವು. ಮೊದಲಿನಿಂದ ಕೊನೆವರೆಗೆ ಕೋಟೆ ಗೋಡೆಯು ಮಣ್ಣಿನಿಂದ ಕಟ್ಟಲ್ಪಟ್ಟು ಸುಟ್ಟ ಇಟ್ಟಿಗೆಯ ಮುಂಪದರ ಹೊಂದಿತ್ತು. ಅದರ ಸುತ್ತಲೂ ಕಂದಕವೂ ಮತ್ತು ರಸ್ತೆ ಇದ್ದವು.

ಕೋಟೆಯ ಮೊದಲನೆ ಕಾಲಾವಧಿಯಲ್ಲೂ ಆರನೇ ಉಪಕಾಲಾವಧಿಯಲ್ಲೂ ಮ ಎರಡನೆ ಕಾಲಾವಧಿಯಲ್ಲೂ ಸಿಕ್ಕುವ ಉತ್ತರದ ಪ್ರಕಾಶಿಸುವ ಕರೀ ಮೃತ್ಪಾತ್ರೆಗಳು ಚಿತ್ರಿಸಿದ ಹಾಗೂ ಕೊರೆಯಲ್ಪಟ್ಟವುಗಳಾಗಿವೆ. ಕಂದು ಮೃತ್ಪಾತ್ರೆಗಳ ಮೇಲೆ ಚಿತ್ರಗಳೂ ಹಾ ಕೆಲವು ವಿಶೇಷ ಆಕೃತಿಗಳುಳ್ಳ ಕಂದುಮಿಶ್ರಿತ ಕೆಂಪು ಪಾತ್ರೆಗಳೂ ಕಂಡುಬಂದಿವೆ.

ಶ್ರಾವಸ್ತಿ.—ಪುರಾತತ್ವ ಇಲಾಖೆಯ ಉತ್ತರ ಮಂಡಲವು ಬೈರಾಚ್ ಜಿಲ್ಲೆಯ ಶ್ರಾ ನಗರವೆಂದು ಹೇಳಲ್ಪಡುವ ಮಹೇತ್ ಎಂಬಲ್ಲಿ ಭೂಶೋಧನೆ ನಡೆಸಿತು. ಕೋಟೆ ಕ ವದಕ್ಕಿಂತ ಮುಂಚಿನ ವಸತಿಯೂ ಇಲ್ಲಿ ಕಂಡುಬಂದಿದೆ.

ಆ ಸ್ಥಳದಲ್ಲಿ ಚಿತ್ರಿತ ಕಂದು ಮೃತ್ಪಾತ್ರೆ, ಉತ್ತರದ ಪ್ರಕಾಶಿತ ಕರೀ ಮೃತ್ಪಾ ಕಪ್ಪು ಮಿಶ್ರಿತ ಕೆಂಪುಪಾತ್ರೆ ಮತ್ತು ಬೂದು ಅಥವಾ ಹೊಂಬಣ್ಣದಿಂದ ಚಿತ್ರಿಸಿದ ಹೊಳಪ ಕರೀ ಪಾತ್ರೆಗಳೂ ಸಿಕ್ಕಿವೆ. ಹಸರು ಗಾಜಿನ ಬಳೆಗಳೂ, ಅಮೂಲ್ಯ ಕಲ್ಲಿನ ಮಣಿಗಳ ಮುಂತಾದ ವಸ್ತುಗಳು ಕೈಗತವಾಗಿವೆ.

ಎರಡನೇ ಕಾಲಾವಧಿಯಲ್ಲಿ ನಿರ್ಮಿಸಲ್ಪಟ್ಟ ಮಣ್ಣಿನ ಕೋಟೆಯು ನಾಲ್ಕು ಬ ಪುನರ್ರಚಿಸಲ್ಪಟ್ಟಿತು. ಮೊಟ್ಟಮೊದಲು ಮಣ್ಣಿನ ರಾಶಿ ಹಾಕಿ ಗೋಡೆಯನ್ನು ರಚಿಸಲಾಯಿತ ಎರಡನೇ ಬಾರಿ ಮಣ್ಣು ರಾಶಿ ಇಟ್ಟಿಗೆ ಗೋಡೆ ಕಟ್ಟಲಾಯಿತು. ಮೂರನೇ ಬಾರಿ ಪು ಮಣ್ಣು ಭರ್ತಿ ಮಾಡಿ ಗೋಡೆಯನ್ನು ಎತ್ತರಿಸಿದರು. ನಾಲ್ಕನೇ ಬಾರಿ ಇದರ ಮೇಲೆ ಇಟ್ಟಿ ಗೋಡೆಯನ್ನು ಕಟ್ಟಿದರು.

ಈ ಕಾಲಾವಧಿಯಲ್ಲಿ ಬದಲಾವಣೆ ಹೊಂದಿದ ಮಣ್ಣಿನ ಪಾತ್ರೆಗಳು ಕೆಂಪು ಹಾಗ ಕಂದು ಬಣ್ಣದವುಗಳಾಗಿ ದಪ್ಪನಾಗಿದ್ದವು. ಅವುಗಳು ಉತ್ತರ ಭಾರತ ಶುಂಗರ ಕಾಲದಲ್ಲಿ ದೊರೆಯುವ ಮೃತ್ಪಾತ್ರೆಗಳ ಆಕಾರವುಳ್ಳವಾಗಿವೆ. ಅಯೋಧ್ಯಾ ಗುಂಪಿ ನಾಣ್ಯಗಳೂ, ಮಣ್ಣಿನ ನಾಗ ಮತ್ತು ಮಿಥುನ ವಿಗ್ರಹಗಳೂ, ಗಾಜಿನ ಹಾಗೂ ಸ್ಫಟಿಕ ಮಣಿಗಳೂ ಸಿಕ್ಕಿವೆ.

ನಗರದ ಆವರಣದಲ್ಲಿ ಭೂಶೋಧನೆ ನಡೆಸಿದ ಕಾರಣ ವಸತಿಯು ಕೋಟೆ ಎರಡನೇ ಕಾಲಾವಧಿಯಲ್ಲಿ ಪ್ರಾರಂಭಿಸಿತೆಂದು ತಿಳಿದುಬಂದಿದೆ. ಅನಂತರದ ವಸತಿಯ ಪೂರ್ವ ಮಧ್ಯ ಕಾಲೀನ ಮೃತ್ಪಾತ್ರೆಗಳು ಸಿಕ್ಕಿವೆ.

ಈ ಎಲ್ಲಾ ವಿಷಯಗಳನ್ನು ಪರಿಶೀಲಿಸಿ ಶ್ರಾವಸ್ತಿಯ ಮೊದಲನೇ ಸಂಸ್ಕೃತಿಯು ಕ್ರಿ.ಪ ಒಂದನೇ ಸಹಸ್ರಾಬ್ದಿಯ ಎರಡನೇ ಚತುರ್ಥಾಂಶದಲ್ಲಿ ಪ್ರಾರಂಭವಾಯಿತೆಂದೂ, ಎರಡನ ಸಂಸ್ಕೃತಿಯು ಕ್ರಿ.ಪೂ. ಮೂರನೇ ಶತಮಾನದ ಮಧ್ಯದಿಂದ ಪ್ರಾರಂಭಿಸಿ ಒಂದನೇ ಶತಮಾನ ಮಧ್ಯದವರೆಗೂ ಹರಡಿತ್ತೆಂದು ಹೇಳಬಹುದು.

೫

ಉದಯಗಿರಿ—ಪುರಾತತ್ವ ಇಲಾಖೆಯ ಪೂರ್ವ ಮಂಡಲವು ಪೂರಿ ಜಿಲ್ಲೆಯ ಪ್ರಸಿದ್ಧವಾದ ಜೈನ ಗುಹಾಲಯಗಳಿರುವ ಉದಯಗಿರಿ ಬೆಟ್ಟದ ಮೇಲೆ ಜಂಬಿಟ್ಟಿಗೆ ಕಲ್ಲಿನಿಂ ನಿರ್ಮಿಸಿದ ಅರ್ಧ ವರ್ತುಲಾಕಾರದ ಕಟ್ಟಡವೊಂದನ್ನು ಅಗೆಯಿತು. ಕಟ್ಟಡದ ಒಳಗ ಪ್ರಾರ್ಥನಾ ಸ್ಥಳದ ಅವಶೇಷವಾದ ವರ್ತುಲಾಕಾರವಾಗಿರುವ ಭಿತ್ತಿಯೊಂದು ಗೋಚರವಾಗಿ ಕೆಲವು ಕಾಲದ ನಂತರ ವರ್ತುಲಾಕಾರದ ಕಟ್ಟಡವು ಅರ್ಧ ವರ್ತುಲಾಕಾರವಾಗಿ ಮಾರ್ಪ ಸಲ್ಪಟ್ಟಿತು. ಈ ಅಂಗಣದಲ್ಲಿ ಸ್ವಲ್ಪ ಸುಟ್ಟ ಕೆಂಪು ಮೃತ್ಪಾತ್ರೆಗಳು ಸಿಕ್ಕಿವೆ. ನೆಲದಲ್ಲಿ ಒಂದ ನೂತನ ಶಿಲಾಯುಧ ಹೊರತು ಮತ್ತೇನೂ ಸಿಕ್ಕಲಿಲ್ಲ.



೧೧. ಭೂಶೋಧನೆ ಮಾಡಿದ ನಂತರ ಕಂಡು ಬರುವ ಬೃಹತ್ ಶಿಲಾ ಗೋರಿ, ಬ್ರಹ್ಮಗಿರಿ (ಮೈಸೂರು ಪ್ರಾಂತ್ಯ).



೧೨. ಸ್ವಾಸ್ತಿಕ ಪೀಠವುಳ್ಳ ಸ್ತೂಪ, ನಾಗಾರ್ಜುನ ಕೊಂಡ.

ಪೂರ್ವಭಾರತದಲ್ಲಿ ಇದೇ ಮೊಟ್ಟಮೊದಲನೆಯ ಅರ್ಧ ವರ್ತುಲಾಕಾರದ ಕಟ್ಟಡ. ಗುಹಾಲಯಗಳಲ್ಲಿ ವಾಸಿಸುತ್ತಿದ್ದ ಜೈನ ಸನ್ಯಾಸಿಗಳಿಗೆ ಇದು ಆರಾಧನಾ ಸ್ಥಾನವಾಗಿತ್ತು. ಈ ಸ್ಮಾರಕದ ಕೆಳಗಿರುವ ಬಂಡೆ ಮೇಲೆ ಶಾಸನವನ್ನು ಕೆತ್ತಿಸಿರುವ ಕಳಿಂಗರಾಜ ಖಾರವೇಲನೇ ಈ ಆರಾಧನಾ ಸ್ಥಳದ ನಿರ್ಮಾಪಕನೆಂದು ಊಹಿಸಲಾಗಿದೆ.

ಚಂದ್ರಕೇತುಗಢ್.—ಇಪ್ಪತ್ತುನಾಲ್ಕು ಪರಗಣಗಳ ಜಿಲ್ಲೆಯಲ್ಲಿರುವ ಚಂದ್ರಕೇತುಗಢ್ ಹತ್ತಿರ ಖಾನಾ ಮಿಸಿಹರ್-ದ್ದಿಪಿ ಎಂಬಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯವು ಭೂಶೋಧನೆಯನ್ನು ಮುಂದೊರೆಸಿತು. ಭೂಶೋಧನೆಯಲ್ಲಿ ಗುಪ್ತರ ದೇವಸ್ಥಾನವಾದ ಇಟ್ಟಿಗೆ ಕಟ್ಟಡವೊಂದು ಹೊರಬಿತ್ತು. ತಳವಿನ್ಯಾಸವು ಚತುರಸ್ರಾಕಾರವಾಗಿದ್ದು ಪೂರ್ವ, ದಕ್ಷಿಣ ಮತ್ತು ಪಶ್ಚಿಮ ಭಾಗಗಳಲ್ಲಿ ಮುಂದೆ ಚಾಚಿಕೊಂಡಿದ್ದು ಉತ್ತರಭಾಗದ ಮಧ್ಯದಲ್ಲಿ ಹಜಾರವೊಂದು ಇದೆ.

ಈ ಪ್ರಾಚೀನ ಸ್ಥಳದ ವಸತಿಯು ಮೂರು ಬೇರೆ ಬೇರೆ ಕಾಲಗಳಿಗೆ ಸೇರಿದ್ದಾಗಿದೆ. ದೇವಾಲಯಕ್ಕಿಂತ ಮುಂಚಿನ ಮೊದಲನೇ ಕಾಲಾವಧಿಯಲ್ಲಿ ಮರ ಮತ್ತು ಬಿದರಿನಿಂದ ಕಟ್ಟಲ್ಪಟ್ಟ ಹೆಂಚಿನ ಮೇಲ್ಛಾವಣಿಯುಳ್ಳ ಕಟ್ಟಡಗಳಿದ್ದವು. ಸಾಮಾನ್ಯವಾಗಿ ಕಂದು ಮೃತ್ಪಾತ್ರೆಯು ತವಗಳು ಉಪಯೋಗದಲ್ಲಿದ್ದವು. ಕುಶಾನ ಶೈಲಿಯ ಕೆಲವು ಮಣ್ಣಿನ ವಿಗ್ರಹಗಳು ಸಿಕ್ಕಿವೆ. ಈ ಕಾಲದಲ್ಲಿ ಕಂದು ಮತ್ತು ಕಪ್ಪು ಮಿಶ್ರಿತ ಕೆಂಪು ಬಣ್ಣದ ಮೃತ್ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಮೂರನೇ ಕಾಲಾವಧಿಯನ್ನು ಸೂಚಿಸುವ ಕೆಲವು ಮಣ್ಣಿನ ಪಾತ್ರೆಗಳು ಇದ್ದರೂ, ಅವುಗಳು ಅಷ್ಟು ಪ್ರಾಧಾನ್ಯವಲ್ಲ.

ಅಮರಾವತಿ—ಗುಂಟೂರ್ ಜಿಲ್ಲೆಯಲ್ಲಿರುವ ಅಮರಾವತಿ ಸ್ತೂಪವು ಹಿಂದೆ ನಾಶಮಾಡಲ್ಪಟ್ಟಿತ್ತು. ಪುರಾತತ್ವ ಇಲಾಖೆ ನಾಗಾರ್ಜುನಕೊಂಡ ಭೂ ಶೋಧನಾ ಯೋಜನೆಯು ಅಮರಾವತಿಯಲ್ಲಿ ಈ ವರ್ಷ ನಡೆಸಿದ ಭೂಶೋಧನೆಯಿಂದ ಸ್ತೂಪದ ಶಿಥಿಲವಾದ ಮೂಲಪೀಠ, ಆಯಕ, ಜಗುಲಿ ಹಾಗೂ ಪ್ರದಕ್ಷಿಣಪಥ ಬೆಳಕಿಗೆ ಬಂದಿವೆ. ಅಕ್ಕಪಕ್ಕದಲ್ಲಿರುವ ಇತರ ಕಟ್ಟಡಗಳು ಮೂರು ಬೇರೆ ಬೇರೆ ಕಾಲಗಳಿಗೆ ಸೇರಿವೆ, ಮೊದಲನೇ ಕಾಲಾವಧಿಯಲ್ಲಿ ಉತ್ತರದ ಪ್ರಕಾಶಿಸುವ ಕಪ್ಪು ಮೃತ್ಪಾತ್ರೆಗಳೂ, ಎರಡನೇ ಕಾಲಾವಧಿಯಲ್ಲಿ ರೋಲೆಟೆಡ್ ವೇರ್ ಪಾತ್ರೆಗಳೂ ಮತ್ತು ಮೂರನೇ ಕಾಲಾವಧಿಯಲ್ಲಿ ಚೀನೀ ಸೆಲಡಾನ್ ಪಾತ್ರೆಗಳೂ ಹಾಗೂ ತಾಂತ್ರಿಕ ವಿಗ್ರಹಗಳೂ ಸಿಕ್ಕುತ್ತವೆ. ಕಟ್ಟಕಡೆಯ ಊರ್ಧ್ವಪಥದಲ್ಲಿನ ಸೀಳುಗಳಲ್ಲಿ ಐದು ಸ್ಫಟಿಕದ ಡಬ್ಬಿಗಳು ದೊರೆತವು. ಬೌದ್ಧ ಮತಕ್ಕೆ ಸೇರಿದ ಅನೇಕ ವಿಗ್ರಹಗಳು ಕೂಡ ಸಿಕ್ಕಿವೆ.

ನಾಗಾರ್ಜುನಕೊಂಡ—ಗುಂಟೂರ್ ಜಿಲ್ಲೆಯಲ್ಲಿ ನೀರಾವರೀ ಯೋಜನೆಯಿಂದ ಮುಳುಗಿ ಹೋಗಲಿರುವ ನಾಗಾರ್ಜುನ ಕೊಂಡದಲ್ಲಿ ಭೂಶೋಧನೆ ಜೋರಾಗಿ ನಡೆಸಲಾಗುತ್ತಿದೆ. ಬೌದ್ಧ ಮತದ ಪ್ರಖ್ಯಾತ ಕಟ್ಟಡಗಳಲ್ಲದೇ ಪ್ರಾಚ್ಯ ಶಿಲಾಯುಧ, ಸೂಕ್ಷ್ಮ ಶಿಲಾಯುಧಗಳೂ, ನೂತನ ಶಿಲಾಯುಗದ ಅವಶೇಷಗಳು, ಬೃಹತ್ ಶಿಲಾ ಗೋರಿಗಳೂ, ಬ್ರಾಹ್ಮಣೀ ಕಟ್ಟಡಗಳು ಮತ್ತು ಕ್ರಿ.ಶ. ಎರಡು-ಮೂರನೇ ಶತಮಾನದ ಇಕ್ಷ್ವಾಕು ರಾಜರ ಪುರ ದರ್ಗವೂ ಸಿಕ್ಕಿವೆ. ಒಂದು ಸ್ಥಳದಲ್ಲಿ ಮೃತ್ಪಾತ್ರಾ ರಹಿತವಾದ ಸೂಕ್ಷ್ಮ ಶಿಲಾಯುಧಗಳು ಕಂಡುಬಂದಿವೆ. ಅನೇಕ ನೂತನ ಶಿಲಾಯುಗದ ಕೊಡಲಿಗಳು ದೊರಕುವ ಮೂರನೇ ಆವರಣದಲ್ಲಿ ಪಶುವಿನ ಎಲುಬುಗಳೂ, ಸೂಕ್ಷ್ಮಾಯುಧಗಳೂ ಮತ್ತು ಕೈಲಿ ತಯಾರಿಸಿದ ಮೃತ್ಪಾತ್ರೆಗಳು ಸಿಕ್ಕಿವೆ.

ಬೃಹತ್‌ಶಿಲಾ ಗೋರಿಯೊಂದನ್ನು ಅಗೆದಾಗ ದೀರ್ಘ ಚತುರಸ್ರಾಕಾರವಾದ ಹೊಳ ಕಂದಕದಲ್ಲಿ ಒಡೆದುಹೋದ ಕಪಾಲವೂ, ಕಬ್ಬಿಣದ ವಸ್ತುಗಳೂ, ಮೃತ್ಪಾತ್ರೆಗಳ ಕಂಡುಬಂದವು.

ಹಿಂದೆ ಸ್ವಲ್ಪ ಅಗೆದಿದ್ದ ಒಂಭತ್ತನೇ ಸ್ತೂಪವನ್ನು ಮತ್ತೆ ಅಗೆದ ಕಾರಣ ಅದ ನಾಲ್ಕು ಭಾಗಗಳು ಗೋಚರವಾದವು. ಸ್ತೂಪವು ಇಹುವಲ ಚಾಂ(ಶಾಂ)ತ ಮೂಲನ ಆಳ್ವಿಕೆಯ ಒಂಭತ್ತನೇ ವರ್ಷದಲ್ಲಿ ಮೂರನೇ ಬಾರಿ ಪುನರ್‍ರಚಿಸಲ್ಪಟ್ಟಿತ್ತೆಂದು ತಿಳಿದುಬಂದಿದೆ. ಕುಮಾ ಸಿರಿವೀರ ' ಎಂದರೆ ವೀರಪುರುಷನು ರಾಜಕುಮಾರನಾಗಿದ್ದಾಗ ' ಎಂದು ತಿಳಿಸುವ ಸಣ ಶಾಸನವೊಂದು ಸ್ತೂಪದ ಕೊಠಡಿಯಲ್ಲಿ ಕಂಡುಬಂದಿದೆ. ಹತ್ತಿರದಲ್ಲಿರುವ ಸ್ತೂಪದ ಪೀಠ ಮೇಲೆ ಸ್ವಾಸ್ತಿಕವನ್ನು ನೋಡಬಹುದು. ಇನ್ನೊಂದು ಸ್ತೂಪದ ಹೊರಭಾಗವು ಮೊದಲ ವಿಗ್ರಹಗಳಿಂದ ಅಲಂಕರಿಸಲ್ಪಟ್ಟಿತ್ತು. ಇವುಗಳನ್ನಲ್ಲದೇ ಬೌದ್ಧಮತಕ್ಕೆ ಸಂಬಂಧಿಸಿದ ಇತ ಕಟ್ಟಡಗಳನ್ನೂ ಕಂಡುಹಿಡಿಯಲಾಯಿತು.

ಅಷ್ಟಭುಜಸ್ವಾಮಿಯ ಮರದ ವಿಗ್ರಹವೊಂದನ್ನು ಸ್ಥಾಪಿಸಲಾಯಿತೆಂದು ಸೂಚಿಸುವ ಅಭೀರ ರಾಜ ವಾಸಿಷ್ಠ ಪುತ್ರ ವಸುಸೇನನ ಆಳ್ವಿಕೆಯ ಒಂಭತ್ತನೇ ವರ್ಷದ ಶಿಲಾಶಾಸನವ ಕೃಷ್ಣಾ ನದಿ ತೀರದಲ್ಲಿ ಸಿಕ್ಕಿದೆ. ಇದೇ ಆವರಣದಲ್ಲಿ ಕೈಗತವಾದ ಶಂಖಗಳ ಮೇಲ "ಅಠಭುಜ ಸವಿಸ" ಎಂಬ ಶಾಸನವನ್ನು ಮತ್ತೂ ಪೀಠದ ಮೇಲಿರುವ ಚಿತ್ರದ ಎರಡು ಪಾರ್ಶ್ವಗಳಲ್ಲಿ ಅಂಕುಶ ಹಾಗೂ ಛತ್ರವನ್ನು ಕೆತ್ತಿರುವುದನ್ನೂ ನೋಡಬಹುದು.

ನಾಗಾರ್ಜುನ ಬೆಟ್ಟದ ಉತ್ತರ ಇಳಿಜಾರಿನಲ್ಲಿ ರಾಜಮನೆತನದವರ ಸ್ಮಶಾನವು ಕಂಡು ಬಂದಿದೆ. ಈ ಸ್ಥಳದಲ್ಲಿ ಎರಡು ವಿಗ್ರಹಗಳು ದೊರತಿವೆ. ಒಂದರಲ್ಲಿ ಸ್ತ್ರೀಯು ಮೃತ ದೇಹ ವನ್ನು ಅಂತ್ಯದರ್ಶನಕ್ಕಾಗಿ ಮಲಗಿಸಿದಂತೆಯೂ, ಮತ್ತೊಂದರಲ್ಲಿ ಸ್ತ್ರೀಯು "ಸತಿ" ಯಾಗು ವುದಕ್ಕಾಗಿ ಏಣಿ ಹತ್ತಿ ಅಗ್ನಿಪ್ರವೇಶ ಮಾಡುತ್ತಿರುವಂತೆಯೂ ಕೆತ್ತಿರುವುದನ್ನು ನೋಡ ಬಹುದು.

ಪುರದುರ್ಗದ ಕೋಟೆ ಗೋಡೆಯಲ್ಲಿ ಎರಡು ಸ್ವರೂಪಗಳು ಕಂಡುಬರುತ್ತವೆ. ಮೊದಲನೆ ಸ್ವರೂಪದಲ್ಲಿ ಮಣ್ಣು ಮತ್ತು ಮೊರಮ್ ರಾಶಿ ಹಾಕಿ ದಿಬ್ಬ ಮಾಡಿ ಅಗಲವಾದ ಕಂದಕ ಅಗೆದಿರುವುದನ್ನು ನೋಡಬಹುದು. ಎರಡನೇ ಸ್ವರೂಪದಲ್ಲಿ ಮಣ್ಣು ದಿಬ್ಬದ ಮೇಲ ಇಟ್ಟಿಗೆ ಗೋಡೆಯನ್ನು ಕಟ್ಟಲಾಗಿದೆ.

ಎಲ್ಲೇಶ್ವರಂ—ನಲಗೊಂದ ಜಿಲ್ಲೆಯಲ್ಲಿ ನಾಗಾರ್ಜುನ ಕೊಂಡಕ್ಕೆ ಎದುರಾಗಿ ಕೃಷ್ಣಾ ನದಿಯ ದಡದಮೇಲಿರುವ ಎಲ್ಲೇಶ್ವರಂ ಎಂಬಲ್ಲಿ ಆಂಧ್ರಪ್ರದೇಶ ಸರ್ಕಾರವು ಭೂಶೋಧನೆ ಮುಂದುವರಿಸಿದುದರ ಪರಿಣಾಮವಾಗಿ ಶಾತವಾಹನರ ಕಾಲದ ಕೆಂಪು ಹಾಗೂ ಕಂದು ಬಣ್ಣದ ಮೃತ್ಪಾತ್ರೆ, ಮಣ್ಣಿನ ಬೊಂಬೆ ಮತ್ತು ಸೀಸದ ನಾಣ್ಯಗಳನ್ನು ಬೆಳಕಿಗೆ ತಂದಿದೆ. ಇವುಗಳ ಕೆಳಗೆ ಮೂರು ಬೃಹತ್ ಶಿಲಾ ಗೋರಿಗಳು ಹಾಗೂ ಆ ಕಾಲದ ಮೃತ್ಪಾತ್ರೆಗಳೂ ಕಂಡು ಬಂದವು. ಒಂದು ಸಮಾಧಿಯಲ್ಲಿ ಎರಡು ನರ ಕಪಾಲಗಳೂ ಮತ್ತಿತರ ಅಸ್ತಿಯು ಇದ್ದವು. ಚಣೆ ಆಕಾರದ ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ಸ್ತೂಪ ಮತ್ತು ನದೀ ಸ್ನಾನ ಕಟ್ಟೆಯ ಅವಶೇಷ ಗಳನ್ನು ಸಮೀಪದಲ್ಲಿ ಕಂಡುಹಿಡಿಯಲಾಗಿದೆ.

ರತ್ನಗಿರಿ—ಪುರಾತತ್ವ ಇಲಾಖೆಯ ಪೂರ್ವಮಂಡಲ ಕಟಕ್ ಜಿಲ್ಲೆಯಲ್ಲಿರುವ ರತ್ನಗಿರಿ ಬೆಟ್ಟದ ಮೇಲೆ ೧೯೫೭-೫೮ರಲ್ಲಿ ಭೂಶೋಧನೆ ನಡೆಸಿದ ಫಲಿತಾಂಶವಾಗಿ ವಿಶಾಲವಾದ



೧೩. ಬೌದ್ಧ ವಿಹಾರದ ಹೆಬ್ಬಾಗಿಲು, ರತ್ನಗಿರಿ (ಒರಿಸ್ಸ)

ಒಂದು ಸ್ತೂಪ ಅದರ ಸುತ್ತಲೂ ಹರಕೆಯಲ್ಲಿ ಅರ್ಪಿಸುವ ಅನೇಕ ಸಣ್ಣ ಸ್ತೂಪಗಳು ಕಂಡು ಬಂದಿದ್ದವು. ಈ ವರ್ಷ ಸ್ತೂಪದ ಉತ್ತರ ಪಾರ್ಶ್ವದಲ್ಲಿ ಶ್ಲಾಘನೀಯವಾದ ಎರಡು ವಿಹಾರಗಳನ್ನು ಕಂಡುಹಿಡಿಯಲಾಯಿತು.

ಮೊದಲನೆ ಸ್ತೂಪದ ಪ್ರವೇಶವು ಪರಿಷ್ಕೃತವಾಗಿ ಅಲಂಕರಿಸಲ್ಪಟ್ಟಿತ್ತು. ಕ್ಲೋರೈಟ್ (Chlorite) ಕಲ್ಲಿನಲ್ಲಿ ಸುಂದರವಾಗಿ ಕೆತ್ತಲ್ಪಟ್ಟ ಪ್ರವೇಶದ್ವಾರದ ಕಲ್ಲಿನ ಪಟ್ಟಿ ಮೇಲೆ ಗಜಲಕ್ಷ್ಮಿ ವಿಗ್ರಹವನ್ನು ನೋಡಬಹುದು. ದ್ವಾರದ ಎರಡು ಪಾರ್ಶ್ವಗಳಲ್ಲಿಯೂ ಬೌದ್ಧ ಮತದ ದೇವತೆಗಳೂ ಬೇರೆ ಬೇರೆ ಭಾಗಗಳಲ್ಲಿ ಕೆತ್ತಲ್ಪಟ್ಟಿವೆ. ಗಂಗ ಮತ್ತು ಯಮುನ ವಿಗ್ರಹಗಳನ್ನು ಸೂಚಿಸುವ ಮೂರ್ತಿಗಳಿವೆ.

ದೇವಾಲಯದ ಹಿಂಭಾಗದ ಗೋಡೆಯಲ್ಲಿ ಖೊಂಡಲೈಟ್ (Khondalite) ಕಲ್ಲಿನಲ್ಲಿ ಕೆತ್ತಿ ಬೇರೆ ಬೇರೆ ಭಾಗಗಳನ್ನು ಜೋಡಿಸಿದ ಮತ್ತು ಭೂಮಿಸ್ಪರ್ಶ ಮುದ್ರೆಯಲ್ಲಿರುವ ಬುದ್ಧನ ಮಹತ್ತರವಾದ ವಿಗ್ರಹವಿದೆ.

ವಿಹಾರವು ಘನವಾಗಿ ಕಟ್ಟಲ್ಪಟ್ಟಿದೆ. ಎಲ್ಲಾ ಬುದ್ಧ ವಿಹಾರಗಳಲ್ಲಿರುವಂತೆ ಪಡಸಾಲೆ ಮತ್ತು ಸಣ್ಣ ಕೋಣೆಗಳಿರುವುದಲ್ಲದೆ ಮಹಡಿ ಕೂಡ ಇದೆ. ಕೆಲಕಾಲದ ಮೇಲೆ ಕಟ್ಟದ ಬಿದ್ದ ಕೆಳಭಾಗದ ಕೋಣೆಗಳಲ್ಲಿ ಮಣ್ಣು ಮತ್ತು ಇಟ್ಟಿಗೆ ತುಂಬಿದ್ದ ಕಾರಣ ಮೊದಲನೆ ಮಹಡಿಯಲ್ಲಿ ಬೌದ್ಧ ಸನ್ಯಾಸಿಗಳು ವಾಸಿಸಿದರು. ಅಂಗಣ ಮತ್ತು ಪಡಸಾಲೆಗಳನ್ನು ಚೊಕ್ಕಟ ಮಾಡಿದ್ದರಿಂದ ವಾಸಕ್ಕನುಕೂಲವಾಯಿತು. ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿದ್ದಲ್ಲದೆ, ಕೆಲವು ಮಾರ್ಪಾಡುಗಳನ್ನು ಮಾಡಿ, ಅಲಂಕರಿಸಲಾಯಿತು. ಆಗಿನ ಕಾಲದ ಒರಿಸ್ಸ ಬ್ರಾಹ್ಮಣ ದೇವಾಲಯದ ಶಿಖರವನ್ನನುಸರಿಸಿ ಮೇಲ್ಭಾಗವನ್ನು ಕಟ್ಟಲಾಯಿತು. ಆದರೆ ಈಗ ಅದು ಪೂರ್ತಿಯಾಗಿ ಬಿದ್ದುಹೋಗಿದೆ.

ಮೇಲೆ ತಿಳಿಸಿದ ವಿಹಾರದ ಸಮೀಪದಲ್ಲಿ ಬೇರೊಂದು ವಿಹಾರ ಕ್ಷೀಣ ಸ್ಥಿತಿಯಲ್ಲಿದೆ. ಈ ವಿಹಾರದಲ್ಲಿ ಪೂರ್ವ ಹಾಗೂ ದಕ್ಷಿಣ ಪಂಕ್ತಿಗಳ ಪ್ರತಿಯೊಂದು ಎದರುಕೋಣೆಯ ಹಿಂಭಾಗದ ಗೋಡೆಯಲ್ಲಿ ಜಾಲಂಧ್ರವಿತ್ತು. ದೇವಾಲಯದ ಹಿಂಭಾಗದ ಗೋಡೆಯಲ್ಲಿ ಖೊಂಡಲೈಟ್ ಕಲ್ಲಿನ ವರಮುದ್ರೆಯಲ್ಲಿರುವ ಬುದ್ಧನ ವಿಗ್ರಹವೊಂದು ನಿಂತಿದೆ.

ವಾಸ್ತು ಶಿಲ್ಪ ಶೈಲಿಯ ಆಧಾರದ ಮೇಲೆ ಮೊದಲನೇ ವಿಹಾರವು ಕ್ರಿ. ಶ. ಲನೇ ಶತಮಾನದಿಂದ ಹದಿಮೂರನೆ ಶತಮಾನದವರೆಗೆ ಉಪಯೋಗದಲ್ಲಿತ್ತೆಂದು ಊಹಿಸಬಹುದು. ಎರಡನೇ ವಿಹಾರವು ಮೊದಲನೆ ವಿಹಾರ ಸ್ಥಾಪನೆಯಾದ ಮೇಲೆ, ಆದರೆ ಇದರ ಪುನರ್ರಚನೆಗಿಂತ ಮುಂಚೆ ಸ್ಥಾಪಿಸಲಾಯಿತು.

ಅನೇಕ ಶಿಲಾ ಮತ್ತು ಕಂಚಿನ ಬುದ್ಧ ವಿಗ್ರಹಗಳೂ, ಮಹಾಯಾನ-ವಜ್ರಯಾನ ಬೌದ್ಧ ಮತದ ದೇವತೆಗಳ ವಿಗ್ರಹಗಳೂ, ಮೂಲಪಾಠಗಳನ್ನು ಕೆತ್ತಿರುವ ನೂರಾರು ಮಣ್ಣಿನ ಬಿಲ್ಲೆ, ವಾಸ್ತುಕಲಾವಶೇಷಗಳು ಮತ್ತು ವಿಗ್ರಹಗಳು ಭೂಶೋಧನೆಯಲ್ಲಿ ಸಿಕ್ಕಿವೆ. ಇವುಗಳಲ್ಲಿ ಮುಖ್ಯವಾದುವೆಂದರೆ "ಶ್ರೀ-ರತ್ನಗಿರಿ ಮಹಾವಿಹಾರಿಯ ಆರ್ಯ ಭಿಕ್ಷು-ಸಂಘಸ್ಯ" ಎಂಬ ಬರೆಹವಿರುವ ಮುದ್ರೆಗಳು. ಈ ಸ್ಥಳಕ್ಕೆ ಹಿಂದೆ ಕೂಡ ರತ್ನಗಿರಿ ಎಂಬ ಹೆಸರಿತ್ತೆಂದು ಈ ಮುದ್ರೆಗಳಿಂದ ತಿಳಿದುಬರುತ್ತದೆ.

೬

ಲಾಲ್‌ಕೋಟೆ–ದೆಹಲಿ—ಪುರಾತತ್ವ ಇಲಾಖೆಯ ವಾಯುವ್ಯ ಮಂಡಲವು ಅಝುಮ್‌ಖಾನ್ ಗೋರಿಯ ಪಶ್ಚಿಮಕ್ಕಿರುವ ಅಂಗಣದಲ್ಲಿ ಭೂಶೋಧನೆ ನಡೆಸಿ ಮಧ್ಯಕಾಲದ ಪ್ರಾರಂಭದ ದೆಹಲಿಯ ರಕ್ಷಣಾ ವ್ಯವಸ್ಥೆಯ ಮನೋರಂಜಕವಾದ ತಪಶೀಲುಗಳನ್ನು ಹೊರಗೆಡಹಿತ ಕಲ್ಲು ಮತ್ತು ಇಟ್ಟಿಗೆಯಿಂದ ಕಟ್ಟಲ್ಪಟ್ಟ ಕೋಟೆ ಮತ್ತು ಅಲ್ಲಲ್ಲಿ ಅರ್ಧ ವರ್ತುಲ ಕಾರದ ಗೋಪುರಗಳೂ ಇವೆ. ಕುತುಬ್‌ಮಿನಾರ್‌ದಿಂದ ಪೂರ್ವದಿಶೆಯಲ್ಲಿ ಲಾಲ್‌ಕೋ ಪುರದುರ್ಗದ ಅವಶೇಷಗಳು ಕಂಡುಬಂದಿವೆ.

ಇಂದ್ರಗಡ್.—ಮಧ್ಯಪ್ರದೇಶ ಸರ್ಕಾರದ ಮಂಡಸೋರ್ ಜಿಲ್ಲೆಯ ಇಂದ್ರಗಡದಲ್ಲಿ ಭೂಶೋಧನೆ ನಡೆಸಿ ನಾಶವಾದ ದೇವಾಲಯದ ಸ್ತಲವಿನ್ಯಾಸ, ಅನೇಕ ಶಿಲ್ಪಾವಶೇಷ ವಿಗ್ರಹಗಳು ಹಾಗೂ ಮೂರು ಶಿಲಾಲೇಖನಗಳನ್ನು ಬೆಳಕಿಗೆ ತಂದಿದೆ. ಇವುಗಳಲ್ಲೊಂದ ಹದಿಮೂರನೇ ಶತಮಾನದ ಶಿಲಾಲೇಖನವಾಗಿದೆ. ದೇವಾಲಯದಿಂದ ಸ್ವಲ್ಪ ದೂರದಲ್ಲಿ ಎಂಟನೇ ಶತಮಾನದಿಂದ ಪ್ರಾರಂಭಿಸಿ ಹನ್ನೆರಡನೇ ಶತಮಾನದವರೆಗೆ ಮೂರು ಕಾಲಾವಧಿ ಗಳಿಗೆ ಸೇರಿದ ಕಟ್ಟಡಗಳು ಕಂಡುಬಂದಿವೆ. ಮೂರು ಫರ್ಲಾಂಗುಗಳ ದೂರದಲ್ಲಿ ಸೂಕ್ಷ್ಮ ಶಿಲಾಯುಧಗಳು, ಮೃತ್ಪಾತ್ರೆ ಮತ್ತು ಅಪೂರ್ಣ ಮಣಿಗಳು ಸಿಕ್ಕಿವೆ.

ಚಿತ್ತೋಡ್—ಪುರಾತತ್ವ ಇಲಾಖೆಯ ಪಶ್ಚಿಮ ಮಂಡಲವು ಚಿತ್ತೋಡ್ ಕೋಟೆಯಲ್ಲಿ ರಜಪೂತ್ ಸ್ತ್ರೀಯರು "ಜೋಹರ್" ನಡೆಸಿದ ಮಹಾಸತಿ ಪ್ರಕಾರದಲ್ಲಿ ಭೂಶೋಧನೆ ನಡೆಸಿದ ಫಲಿತಾಂಶವಾಗಿ ಐದು ಬೇರೆ ಬೇರೆ ಕಾಲಾವಧಿಗಳಿಗೆ ಸೇರಿದ ಕಟ್ಟಡಗಳು ಕಂಡು ಬಂದಿವೆ. ಅವುಗಳಲ್ಲಿ ಮೂರು ಮತ್ತು ನಾಲ್ಕನೆ ಕಾಲಾವಧಿಗೆ ಸೇರಿದ ಮೂರು ದೇವಾಲಯ ಗಳು ಮತ್ತು ಬೂದಿಭರಿತವಾದ ಕಲ್ಲಿನ ಸಣ್ಣ ಕಟ್ಟಡ ಒಂದು ಮುಖ್ಯವಾದವು. ಅವುಗಳ ಸಮೀಪದಲ್ಲಿ ಕಂಡುಬಂದ ಮೂರು ಗುಂಡಿಗಳಲ್ಲಿಯೂ ಬೂದಿ ತುಂಬಿತ್ತು. ಇವಲ್ಲದೆ ಮೂರು "ಸತಿ" ಕಲ್ಲುಗಳೂ ಸಹ ಸಿಕ್ಕಿವೆ.

## ಲಿಪಿಶಾಸ್ತ್ರ.

ಈ ಕೆಳಗೆ ವಿವರಿಸಿದ ಶಾಸನಗಳು ಈ ವರ್ಷ ಕಂಡುಹಿಡಿದ ಅನೇಕ ಶಾಸನಗಳಲ್ಲಿ ಮುಖ್ಯವಾದುವು:—

೧

ಅಫ್‌ಘಾನಿಸ್ಥಾನದಲ್ಲಿ ಕಾಂದಹಾರ್ ಹತ್ತಿರ ಅಶೋಕನ ಶಾಸನವೊಂದು ಸಿಕ್ಕಿರುವುದಾಗಿ ವರದಿಯಾಗಿದೆ. ಅಶೋಕ ಚಕ್ರವರ್ತಿಯು ಹತ್ತು ವರ್ಷ ರಾಜ್ಯವಾಳಿದನಂತರ ಹೊರಡಿಸಿದ ಈ ರಾಜಾಜ್ಞೆಯು ಗ್ರೀಕ್ ಮತ್ತು ಅರಾಮಿಕ್ ಭಾಷೆಗಳಲ್ಲಿ ಬರೆಯಲ್ಪಟ್ಟಿದೆ.

## ೨

ಬ್ರಾಹ್ಮಿ ಶಾಸನಗಳಲ್ಲಿ ಈ ಕೆಳಗೆ ಕಂಡವುಗಳು ಮುಖ್ಯವಾಗಿವೆ :—

ಔರಂಗಾಬಾದ್ ಜಿಲ್ಲೆಯ ಪಿತ್ತಲ್‌ಖೋರಾ ಬೌದ್ಧ ಗುಹಾಲಯಗಳಲ್ಲಿ ದೊರೆತ ಎರಡು ಶಾಸನಗಳಲ್ಲಿ ಒಂದು, ಧೇನುಕಕಟ ಗ್ರಾಮಸ್ಥನು ಮಾಡಿದ ದಾನವನ್ನು ತಿಳಿಸುತ್ತದೆ.

ಇಕ್ಷ್ವಾಕು ವಂಶದ ರಾಜನಾದ ವಾಶಿಷ್ಠೀಪುತ್ರ ಏಹುವಲ ಚಾಂ (ಶಾಂ)ತ ಮೂಲನ ರಾಜ್ಯಭಾರದ ೧೩ನೇ ವರ್ಷದಲ್ಲಿ ಬರೆಯಿಸಿದ ಅನೇಕ ಶಾಸನಗಳು ನಾಗಾರ್ಜುನಕೊಂಡದಲ್ಲಿ ಸಿಕ್ಕಿವೆ. ಮಥುರಾದಲ್ಲಿ ಸಿಕ್ಕಿರುವ ಎರಡು ಶಿಲಾಶಾಸನಗಳ ಪೈಕಿ ಒಂದು ಕುಷಾನರ ರಾಜ ಕಾನಿಷ್ಕನ ಆಡಳಿತದ ನಾಲ್ಕನೇ ವರ್ಷಕ್ಕೆ ಸೇರಿದ್ದು, ಮತ್ತೊಂದು ಕಾನಿಷ್ಕ ಶಕೆಯ ೯೬ನೇ ವರ್ಷಕ್ಕೆ ಸೇರಿದೆ. ಸೌರಾಷ್ಟ್ರದಲ್ಲಿ ದೊರೆತಿರುವ ಮೂರು ಸಾಲುಗಳ ಶಾಸನವು ಕ್ಷತ್ರಪರ ಕಾಲಕ್ಕೆ ಸೇರಿದ್ದಾಗಿದೆ.

## ೩

ಮಥುರಾದಲ್ಲಿ ದೊರೆತ ಐದನೇ ಶತಮಾನದ ಶಾಸನದಲ್ಲಿ ನೃಪಮಿತ್ರನೆಂಬ ರಾಜನ ಹೆಸರು ಹಾಗೂ ದಿತ್ತ ಎಂಬ ಕವಿಯ ಹೆಸರು ಕಂಡುಬರುತ್ತವೆ. ಬಿಲಾಸ್‌ಪುರ ಜಿಲ್ಲೆಯ ಮಲ್ಲಾರದಲ್ಲಿ ಜಯರಾಜ, ಪ್ರವರರಾಜ ಮತ್ತು ವ್ಯಾಘ್ರರಾಜರ ಮೂರು ಜೊತೆ ತಾಮ್ರದ ಶಾಸನಗಳು ಸಿಕ್ಕಿವೆ. ಭೂಪಾಲ್ ಸಮೀಪ ಧರ್ಮಪುರಿಯಲ್ಲಿರುವ ಗುಹಾಶ್ರಯದಲ್ಲಿ ಗುಪ್ತರ ಕಾಲದ ಚಿತ್ರಿತ ಗ್ರಂಥ ದೊರೆತಿದೆ. ಚಿತ್ತೋಡನ ಆರನೇ ಶತಮಾನದ ಶಿಲಾಶಾಸನದಲ್ಲಿ ದಶಪುರದ (ಮಂಡಸೋರಿನ) ರಾಜಸ್ಥಾನೀಯನೊಬ್ಬನನ್ನು, ಮಧ್ಯಮನಗರಿಯನ್ನು, ವರಾಹನೆಂಬಾತನ ಹೆಸರನ್ನು, ವಿಷ್ಣುದತ್ತನೆಂಬ ವ್ಯಾಪಾರಿಯನ್ನು ಹಾಗು ಮನೋರಥಸ್ವಾಮಿಯ ದೇವಸ್ಥಾನವನ್ನೂ ನಮೂದಿಸಿದೆ. ದರ್ಭಂಗ ಜಿಲ್ಲೆಯಲ್ಲಿ ಕಂಡುಬಂದ ಮಧ್ಯಕಾಲದ ಆದಿ ಭಾಗಕ್ಕೆ ಸೇರಿದ ತಾಮ್ರ ಶಾಸನದಿಂದ ಜೀವಗುಪ್ತನೆಂಬ ರಾಜನ ಹೆಸರು ಮತ್ತು ಅವನ ತಂದೆಯಾದ ರಾಮಗುಪ್ತನ ಹೆಸರನ್ನು ತಿಳಿಯಬಹುದು.

## ೪

ಷಾಹಾಬಾದ್ ಜಿಲ್ಲೆ ತಾರಾಚಂಡಿಯ ವಿಕ್ರಮ ಸಂವತ್ ೧೨೨೫ (ಕ್ರಿ.ಶ. ೧೧೬೯)ನೇ ಸಾಲಿನ ಶಿಲಾಶಾಸನದಲ್ಲಿ ಪ್ರಾಂತ್ಯಾಧಿಕಾರಿ ಮಹಾನಾಯಕ ಪ್ರತಾಪಧವಳನು ಸ್ವರ್ಣಹಾಲ (ಸುವರ್ಣಹಾಲ)ದ ಬ್ರಾಹ್ಮಣರು ಕನೂಜಿನ ದೊರೆಯಾದ ವಿಜಯಚಂದ್ರನ ಸೇವಕನಿಗೆ ಲಂಚ ಕೊಟ್ಟು ಅವನಿಂದ ಒಂದು ಕೃತ್ರಿಮ ತಾಮ್ರಶಾಸನವನ್ನು ಪಡೆದು ಮೋಸದಿಂದ ಎರಡು ಗ್ರಾಮಗಳನ್ನು ಅನುಭವಿಸುತ್ತಿದ್ದರೆಂದು ತಿಳಿಸಿದ್ದಾನೆ. ಉದಯಪುರ ಜಿಲ್ಲೆಯ ಈಶ್ವಲ ಎಂಬಲ್ಲಿರುವ ಪಂಚಾಯತನ ದೇವಾಲಯದ ಶಾಸನವು ಗುಹಿಲರಾಜನಾದ ಮಥನಸಿಂಹನ ಹೆಸರನ್ನು ಸೂಚಿಸುತ್ತದೆ. ಉಜ್ಜಯನೀಯಲ್ಲಿ ದೊರೆತ ಶಾಸನಗಳಲ್ಲಿ ಒಂದು ಪ್ರಾಕೃತದಲ್ಲಿರುವ ನಾಟಕದ ಮೂಲಗ್ರಂಥವನ್ನೂ, ಮತ್ತೊಂದು ಪರಮಾರ ರಾಜನು ಅಯೋಧ್ಯವನ್ನು ಗೆದ್ದಿರುವುದನ್ನೂ, ಯುದ್ಧದಲ್ಲಿ ಜಯಶಾಲಿಯಾದ ರಣರಂಗಮಲ್ಲನನ್ನು ಬೆಳಕಿಗೆ ತಂದಿದೆ.

ಗಂಜಾಮ್ ಜಿಲ್ಲೆಯ ಬೇರೆ ಬೇರೆ ಸ್ಥಳಗಳಲ್ಲಿ ಆರು ತಾಮ್ರ ಶಾಸನಗಳು ಸಿಕ್ಕಿವೆ. ಮೊದಲನೆಯದು ಮಹಾರಾಜ ಉಮಾವರ್ಮನಿಗೂ, ಎರಡನೆಯದು ಮಹಾರಾಜ ನಂದ ಪ್ರಭಂಜನನಿಗೂ, ಮೂರನೇಯದು ಗಂಗವಂಶದ ಶ್ವೇತಕ ಶಾಖೆಯ ಮಹಾರಾಜ ಜಯವರ್ಮ ನಿಗೂ, ನಾಲ್ಕನೇಯದು ಅದೇ ಶಾಖೆಯ ಮಹಾರಾಜ ಸಾಮಂತವರ್ಮನಿಗೂ, ಐದನೇಯದು ಶೈಲೋದ್ಭವನೆಂಬ ರಾಜನಿಗೂ, ಆರನೇಯದು ಭುಜರಾಜನಿಗೂ ಸೇರಿದೆ. ಅಂತ್ಯದಲ್ಲಿ ತಿಳಿಸಿದ ಶಾಸನವು ಇದಕ್ಕೆ ಮುಂಚಿನ ಶೈಲೋದ್ಭವ ಶಾಸನದ ಮೇಲೆ ಕೆತ್ತಲ್ಪಟ್ಟಿದೆ.

೬

ಕಲ್ಕತ್ತದಲ್ಲಿ ಸಂಗ್ರಹಿಸಿರುವ ಶಾಸನಗಳಲ್ಲಿ ಎರಡು ಮುಖ್ಯವಾದವು. ಒಂಬತ್ತನೇ ಶತಮಾನದ ಒಂದು ಶಾಸನವು ಮಣಿನಾಗ ವಿಗ್ರಹಾರ್ಪಣೆಯನ್ನು ತಿಳಿಸುತ್ತದೆ. ಎರಡನೇ ಯದು ಹತ್ತನೆ ಶತಮಾನಕ್ಕೆ ಸೇರಿದೆ. ಇದು ಮೂಲಸರ್ವಸ್ತಿವಾದ ಪರಿಷತ್ತಿನ ವಂಗ ವಿಷಯಕ್ಕೆ ಸೇರಿದ ಸ್ಥಾವೀರ ಧರ್ಮಮಿತ್ರನ ವಿಗ್ರಹವನ್ನು ಅರ್ಪಿಸಿರುವುದಾಗಿ ಸೂಚಿಸುತ್ತದೆ.

೭

ಅಹಮದಾಬಾದ್ ಜಿಲ್ಲೆಯ ಹಿಲೋಲ್ ಗ್ರಾಮದಲ್ಲಿ ದೊರೆತ ತಾಮ್ರಶಾಸನ ಮಹಾ ರಾಜಾಧಿರಾಜ ಕಕ್ಕನ ಆಳ್ವಿಕೆಯಲ್ಲಿ ಮಹಾಸಾಮಂತ ಚಂದ್ರಾದಿತ್ಯನು ಮಾಡಿದ ಭೂದಾನವನ್ನು ತಿಳಿಸುತ್ತದೆ. ನಾಂದೇರ್ ಜಿಲ್ಲೆಯ ಬಹಾದುರ್‌ಪುರದ ಮುರುಕು ಶಾಸನದಲ್ಲಿ ರಾಷ್ಟ್ರಕೂಟ, ಯಾದವ ಮತ್ತು ತುಂಗ ವಂಶಕ್ಕೆ ಸೇರಿದ ದಂತಿದುರ್ಗ, ಒಂದನೇ ಕೃಷ್ಣ ಮೊದಲಾದ ದೊರೆಗಳ ಹೆಸರುಗಳು ಕಂಡುಬರುತ್ತವೆ. ಅದೇ ಜಿಲ್ಲೆಯ ಹೊತ್ತೂರಿನಲ್ಲಿ ಸಿಕ್ಕಿರುವ ಶಾಸನದ ಪ್ರಕಾರ ವಹ್ನಿಕುಲ ಅರಸರ ಕೈಗೆಳಗಿದ್ದ ಸಿದ್ಧಗಿ ಎಂಬಾತನು ಶಿವಾಲಯವನ್ನು ಕಟ್ಟಿಸಿದನೆಂದೂ, ವಹ್ನಿಕುಲ ಅರಸರು ಕಲ್ಯಾಣದಲ್ಲಿ ಸ್ಥಾಣು ದೇವತೆಯನ್ನು ಸ್ಥಾಪಿಸಿದರೆಂದೂ ಗೊತ್ತಾಗಿದೆ. ಈ ಜಿಲ್ಲೆಯ ತಾಡ್‌ಖೆಲ್‌ನ ಎರಡು ಶಾಸನಗಳಲ್ಲಿ ಪಶ್ಚಿಮ ಚಾಲುಕ್ಯ ರಾಜ ರಾದ ತ್ರೈಲೋಕ್ಯಮಲ್ಲ ಒಂದನೇ ಸೋಮೇಶ್ವರನ ಹಾಗೂ ಭುವನೈಕಮಲ್ಲ ಎರಡನೇ ಸೋಮೇಶ್ವರನ- ಹೆಸರುಗಳು ಕಂಡುಬರುತ್ತವೆ. ಪರ್ಭನಿ ಜಿಲ್ಲೆಯ ಉಕಲದ್ ಎಂಬಲ್ಲಿ ದೊರೆತ ಜೈನ ವಿಗ್ರಹಗಳ ಪೀಠದ ಮೇಲೆ ೧೩೩೮ರಿಂದ ೧೭೬೪ರ ವರೆಗಿನ ಎಪ್ಪತ್ತು ಶಾಸನಗಳು ಕಂಡುಬಂದಿವೆ. ಸೂರತ್ ಜಿಲ್ಲೆಯ ನವಸಾರಿಯಲ್ಲಿ ಯಾದವ ದೊರೆ ರಾಮಚಂದ್ರನ ಶಾಸನವೊಂದು ದೊರೆತಿದೆ.

೮

ಅನಂತಪುರ ಜಿಲ್ಲೆಯ ವೀರರೆಡ್ಡಿ ಪಾಳ್ಯದಲ್ಲಿ ದೊರೆತ ಶಾಸನ ಪೂರ್ವ ಚಾಲುಕ್ಯ ದೊರೆಯಾದ ವಿನಯಾದಿತ್ಯ ಸತ್ಯಾಶ್ರಯನ ಆಳ್ವಿಕೆಯ ಹತ್ತನೇ ವರ್ಷಕ್ಕೆ (೬೯೦) ಸೇರಿದ್ದಾ ಗಿದೆ. ವಾರಂಗಲ್ ಜಿಲ್ಲೆಯ ಜಾಫರ್‌ಗಡದಲ್ಲಿ ಕಂಡುಬಂದ ಒಂಬತ್ತನೇ ಶತಮಾನದ ಕನ್ನಡ

ಶಾಸನವು ಆಂಧ್ರ ದೇಶದಲ್ಲಿರುವ ರಾಷ್ಟ್ರಕೂಟರನ್ನು ಸೂಚಿಸುತ್ತದೆ. ಆದರೆ ರಾಜನ ಹೆಸರು ಸ್ಪಷ್ಟವಾಗಿಲ್ಲ. ಪೂರ್ವ ಚಾಲುಕ್ಯರ ಕೊನೆಯ ಅರಸರುಗಳಲ್ಲೊಬ್ಬನಾದ ಸರ್ವಲೋಕಾಶ್ರಯ ವಿಷ್ಣುವರ್ಧನ ಮಹಾರಾಜನ ಹೆಸರನ್ನು ವಿಶಾಖಪಟ್ಟಣ ಜಿಲ್ಲೆಯ ಗೋಪಾಲಪಟ್ಣದಲ್ಲಿ ದೊರೆತ ಶಾಸನದಲ್ಲಿ ನೋಡಬಹುದು. ಅದೇ ಜಿಲ್ಲೆಯ ರಾಜಾಡದಲ್ಲಿ ಪೂರ್ವಗಂಗರ ಅರಸನಾದ ಅನಂತವರ್ಮ ಚೋಡಗಂಗನ ತಮಿಳು ಶಾಸನವೊಂದಿದೆ. ಮಲೈ ಮಂಡಳಜ ವ್ಯಾಪಾರಿಯು ದೇವಾಲಯಕ್ಕೆ ಕೊಟ್ಟ ದಾನವನ್ನೂ ತಿಳಿಸುತ್ತದೆ. ಪೂರ್ವ ಮತ್ತು ಪಶ್ಚಿಮ ಸಮುದ್ರ ತೀರಗಳಗಿದ್ದ ವ್ಯಾಪಾರ ಸಂಬಂಧವನ್ನೂ ಈ ಶಾಸನದಿಂದ ತಿಳಿಯಬಹುದು. ವಾರಂಗಲ್ ಜಿಲ್ಲೆಯ ಹನುಮಕೊಂಡದ ಸಮೀಪವಿರುವ ಕುಮಾರಪಲ್ಲಿಯ ಬಳಿ ಬಂಡೆಗಲ್ಲಿನ ಮೇಲೆ ಕೆತ್ತಿರುವ ೧೦೭೯ನೇ ಇಸ್ವಿಯ ಶಾಸನವು ವಿಕ್ರಮಚಕ್ರನ್ ಮಹಾಮಂಡಲೇಶ್ವರ ಎರಡನೇ ಬೇತನ ಕಾಲದ್ದಾಗಿದೆ. ಈವರೆಗೆ ಕಂಡುಬಂದ ಕಾಕತೀಯರ ಶಾಸನಗಳಲ್ಲಿ ಇದು ಅತ್ಯಂತ ಪ್ರಾಚೀನವಾದದ್ದು. ಈ ವಂಶಜನಾದ ಗಣಪತಿಯ ಶಾಸನವು ಕರೀಂನಗರ ಜಿಲ್ಲೆಯ ಮಂಥನಿಯಲ್ಲಿ ಸಿಕ್ಕಿದೆ. ಕಾಕತೀಯರಾಜ ಗಣಪತಿ ದೇವನ ರಾದ ಗುರುವಿನ ಮಗನಾದ ನಾರಾಯಣ ಮಹರ್ಷಿಯು ಯೋಗಶಾಸ್ತ್ರದ ಮೇಲೆ ರಚಿಸಿದ ಕವಿತೆಯು ವಾರಂಗಲ್ ಬಂಡೆಯಮೇಲೆ ಕೆತ್ತಲ್ಪಟ್ಟಿದೆ. ಈ ಕವಿಯು ಸಿದ್ಧ ದಂಪತಿಗಳ ಮೇಲೆ ರಚಿಸಿದ ಭಾವಗೀತೆಯು ಕೂಡ ಇದೇ ರೀತಿ ಕೆತ್ತಲಾಗಿದೆ. ಸತ್ಯಾಶ್ರಯ ಕುಲದ ಗುಣಗರಸ ರಾಜನ ಹೆಸರನ್ನು ೧೦೦೬ನೇ ವಾರಂಗಲ್ ಜಿಲ್ಲೆಯ ನಾರಾಯಣ ಗಿರಿ ಶಾಸನದಲ್ಲಿ ನೋಡಬಹುದು. ಚಾಲುಕ್ಯರ ನಾರಾಯಣದೇವ ಪುದೊಲರಸನು ವಿಕ್ರಮಚೋಳ ಸಂವತ್ಸರದ ಮೂರನೇ ವರ್ಷದಲ್ಲಿ (೧೧೨೧-೨೨. ಕ್ರಿ.ಶ.) ದಾನಮಾಡಿದನೆಂದು ಚಿತ್ತೂರ್ ಜಿಲ್ಲೆಯ ಮುಂದ್ಲಪುಡಿ ಶಾಸನದಿಂದ ತಿಳಿಯಬಹುದು. ವಿಶಾಖಪಟ್ಣ ಜಿಲ್ಲೆಯ ದಿಮಿಲಿಯಲ್ಲಿ ಸಿಕ್ಕಿರುವ ೧೧೯೨-೯೩ನೇ ಶಾಸನದಲ್ಲಿ ಜಯಮಹಾದೇವಿ ಮಗನಾದ ಕುಲೋತ್ತುಂಗ ಪೃಥ್ವೀಶ್ವರನ ಹೆಸರನ್ನು ತಿಳಿಸಲಾಗಿದೆ. ಈ ಜಿಲ್ಲೆಯ ಗಜುಲಪೆಲ್ಲೂರಿನ ಹದಿನಾಲ್ಕನೆ ಶತಮಾನದ ತಮಿಳು ಶಾಸನದಲ್ಲಿ ರಾಜಗಂಡಗೋಪಾಲನೆಂಬ ರಾಜನ ಹೆಸರನ್ನು ಸೂಚಿಸಿದೆ. ಅನಂತಪುರ ಜಿಲ್ಲೆಯ ಯಾಡಿಕಿ ಎಂಬಲ್ಲಿಯ ಹದಿನಾರನೆ ಶತಮಾನದ ಕೆಲವು ತೆಲಗು ಶಾಸನಗಳು ದೇವಾಲಯದ ಅಧಿಕಾರಿಗಳು ಅಥವಾ ಇತರರು ಹಣವನ್ನು ಸಾಲವಾಗಿ ಕೊಡುತ್ತಿದ್ದದಾಗಿ ತಿಳಿಸುತ್ತವೆ.

## ೬

ಮೈಸೂರು ಪ್ರಾಂತದಲ್ಲಿ ಪಶ್ಚಿಮ ಚಾಲುಕ್ಯರ ಅನೇಕ ಶಾಸನಗಳನ್ನು ಕಂಡುಹಿಡಿಯಲಾಯಿತು. ಬಿದರ್ ಜಿಲ್ಲೆಯ ಜಲಸಂಗ್ವಿ ದೇವಾಲಯದ ಶಾಸನದಲ್ಲಿ ರಾಜವಿಕ್ರಮಾದಿತ್ಯನನ್ನು ಪ್ರಶಂಸಿಸಲಾಗಿದೆ. ತ್ರೈಲೋಕ್ಯಮಲ್ಲನ ಕಾಲದಲ್ಲಿ ಮೂರು ದೇವಾಲಯಗಳನ್ನು ಕಟ್ಟಿದ ವಿಷಯವನ್ನು ಗುಲ್ಬರ್ಗ ಜಿಲ್ಲೆಯ ಶಿರಹಳ್ಳಿ ಶಾಸನ ತಿಳಿಸುತ್ತದೆ. ಈ ಜಿಲ್ಲೆಯಲ್ಲಿರುವ ಸೆದಂ ಎಂಬ ಗ್ರಾಮದ ಸ್ತಂಭದ ಮೇಲೆ ಕೆತ್ತಿರುವ ಶಾಸನದಲ್ಲಿ ತ್ರಿಭುವನಮಲ್ಲರಾಜನ ಹೆಸರನ್ನು ಸೂಚಿಸಿದೆ. ಈ ವಂಶಜರ ಅನೇಕ ಶಾಸನಗಳು ರಾಯಚೂರು ಜಿಲ್ಲೆಯಲ್ಲಿ ಸಿಕ್ಕಿವೆ. ಅವುಗಳಲ್ಲಿ ೧೦೧೪ನೇ ಸಾಲಿನಲ್ಲಿ ಬರೆದ ಒಂದು ಶಾಸನವು ಐದನೇ ವಿಕ್ರಮಾದಿತ್ಯನ ಆಡಳಿತದ ಕೊನೆಯ ಕೆಲವು ತಿಂಗಳುಗಳಿಗೆ ಸೇರಿದ್ದು. ೧೦೬೬ನೇ ಸಾಲಿಗೆ ಸೇರಿದ ಮತ್ತೊಂದು ಶಾಸನದಲ್ಲಿ ಚೋಳರೊಡನೆ ಹೋರಾಡಿದ ಮರಪೆರ್ಮಲದೇವನೆಂಬ ಅಧಿಕಾರಿಯ ಹೆಸರನ್ನು ಮತ್ತು ಕದಂಬರ ಅಧೀನನಾದ ನಾಗವರ್ಮರಸನ ಹೆಸರನ್ನೂ ತಿಳಿಸುತ್ತದೆ. ಮೂರನೆಯ ಶಾಸನವು ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದಾಗಿ ೧೧೧೯ನೇ ಇಸವಿಯಲ್ಲಿ ಬರೆ

ಯಲ್ಪಟ್ಟಿದೆ. ಅದರಲ್ಲಿ ಕದಂಬರ ಬುಟ್ಟರಸ ಹೆಸರು ಕಂಡುಬರುತ್ತದೆ. ಭೂಲೋಕವ ಸೋಮೇಶ್ವರನ ರಾಜ್ಯಾಡಳಿತದಲ್ಲಿ ನಾಲ್ಕನೆ ಶಾಸನವು ೧೧೩೫ರಲ್ಲಿ ಬರೆಯಲ್ಪಟ್ಟಿತ ಬುಟ್ಟರಸನ ಮಗನಾದ ಮಹಾವತ್ತಿರಸನ ಹೆಸರನ್ನು ಇದರಲ್ಲಿ ಕಾಣಬಹುದು. ಹಲ್ಕವತಿಗಿ ಶಾಸನದಲ್ಲಿ ಕದಂಬ ಕುಲದ ದೊರೆ ಸಿಂಗರಸನ ಹೆಸರನ್ನು ಹೇಳಲಾಗಿದೆ. ೧೧೨೦ರ ನಾಗಾರ್ಜುನದ ಬಚಿಗನು ದೇಹವನ್ನು ತ್ಯಜಿಸಿದನೆಂದು ನಾಗವಂದದ ಶಾಸನದಿ ತಿಳಿಯುಬರುತ್ತದೆ.

ಎರಡು ಕಾಲಚೂರಿ ವಂಶದ ಶಾಸನಗಳೂ ಸಿಕ್ಕಿವೆ. ೧೧೮೬ರ ಸಾಂಕಮದೇವ ಕಾಲದಲ್ಲಿ ಕೊಟ್ಟ ದಾನವನ್ನು ತಿಳಿಸುವ ಅನುಮಾನಾಸ್ಪದವಾದ ತಾಮ್ರಪತ್ರವೊಂ ಬಿಜಾಪುರ ಜಿಲ್ಲೆಯ ನಿಂಬಾಲ್‌ನಲ್ಲಿ ಕಂಡುಬಂದಿದೆ. ಎರಡನೇಯದು ಧಾರವಾಡ ಜಿಲ್ಲೆಯ ಯಮ್ಮಿಗನೂರಿನ ಶಿಲಾಶಾಸನ. ಇದು ೧೨೦೨ರಲ್ಲಿ ರಾಯಮುರಾರಿ ಸೋವಿದೇವನ ಕಾಲದ ಬರೆಸಿದ್ದು. ಸೋವಿಶೆಟ್ಟಿ ಎಂಬಾತನು ಉತ್ತರ ದೇಶಕ್ಕೆ ವ್ಯಾಪಾರಕ್ಕಾಗಿ ಪ್ರಯಾ ಮಾಡುತ್ತಿದ್ದಾಗ ಹಾದಿಯಲ್ಲಿ ಕಳ್ಳರ ಕೈಗೆ ಸಿಕ್ಕು ಅವರ ಜೊತೆಯಲ್ಲಿ ಹೋರಾಡಿ ಮಡಿದನೆಂದ ಈ ಶಾಸನ ತಿಳಿಸುತ್ತದೆ.

ಧಾರವಾಡ ಜಿಲ್ಲೆಯ ಕಚವಿಯಲ್ಲಿ ದೊರೆತ ರಾಷ್ಟ್ರಕೂಟರ ಶಾಸನದಲ್ಲಿ ಧರವರ್ಷ ಧೋರನೆಂಬ ಅರಸನ ಹೆಸರನ್ನು ಸೂಚಿಸಿದೆ. ಅಣಜಿಯಲ್ಲಿರುವ ಮತ್ತೊಂದು ಶಾಸನ ಅಮೋಘವರ್ಷನ ಕಾಲದ್ದು. ಅದಳಿಕಟ್ಟಿ ಗ್ರಾಮದ ೯೩೦ನೇ ಇಸ್ವಿ ಮೂರು ಶಾಸನಗಳ ನಾಲ್ಕನೇ ಗೋಪಿಂದನ ಕಾಲಕ್ಕೆ ಸೇರಿವೆ. ಯಾದವ ದೊರೆಯಾದ ಸಿಂಹಣನ ಕಾಲಕ್ಕೆ ಸೇರಿದ ಶಾಸನವು ಇದೇ ಜಿಲ್ಲೆಯ ಕೊಡಮಗ್ಗಿಯಲ್ಲಿ ಸಿಕ್ಕಿದೆ. ಆ ಶಾಸನದಲ್ಲಿ ಸಿಂದರ ಒಡೆಯ ನಾದ ಬೊಮ್ಮಿ ದೇವರಸನ ಹೆಸರನ್ನು ತಿಳಿಸಿದೆ.

ಶಿವಮೊಗ್ಗ ಸಮೀಪದಲ್ಲಿ ದೊರೆತಿರುವ ಪಾರ್ಶ್ವನಾಥ ವಿಗ್ರಹದ ಪೀಠದ ಮೇಲಿನ ಶಾಸನದಲ್ಲಿ ಜಿನಾಲಯ ಕಟ್ಟಿದ ವಿಷಯವನ್ನು ತಿಳಿಸುತ್ತದೆ.

## ೧೦

ತಂಜಾವೂರು ಜಿಲ್ಲೆಯಲ್ಲಿ ಪಲ್ಲವರಾಜನಾದ ಸಿಂಹವರ್ಮನ (ಸುಮಾರು ಕ್ರಿ. ಶ. ೫೫೦–೫೭೫) ತಾಮ್ರ ಶಾಸನ ದೊರೆತಿದೆ. ಪಲ್ಲವರ ತಮಿಳು ಶಾಸನಗಳಲ್ಲಿ ಇದು ಅತ್ಯಂತ ಪ್ರಾಚೀನವಾದುದು. ಪಾಂಡ್ಯರಾಜ ಪರಾಂತಕ ವೀರ ನಾರಾಯಣ ಸದೈಯನ್‌ನ ಶಾಸನವು ತಿರುನಲ್‌ವೇಲಿ ಜಿಲ್ಲೆಯ ದಳವಾಯಪುರದಲ್ಲಿ ಸಿಕ್ಕಿದೆ.

ಕನ್ಯಾಕುಮಾರಿ ಜಿಲ್ಲೆ ಸುಚೀಂದ್ರಂ ದೇವಾಲಯದಲ್ಲಿ ಸಿಕ್ಕಿರುವ ೧೨೨೮ನೇ ಇಸ್ವಿ ಶಾಸನ ಗಳಿಂದ ಆ ದೇವಾಲಯದ ಆಡಳಿತದ ವಿಷಯವಾಗಿ ತಿಳಿದುಬರುತ್ತದೆ. ಶೋಳಂತಲೈಕೊಂಡ ವೀರ ಪಾಂಡ್ಯನ ಕಾಲದ ಶಾಸನ ಕೂಡ ಅಲ್ಲಿ ದೊರೆತಿದೆ. ಕನ್ಯಾಕುಮಾರಿ ಜಿಲ್ಲೆ ಪದ್ಮನಾಭ ಪುರದ ಸಂಗ್ರಹಾಲಯದಲ್ಲಿರುವ ಶಾಸನಗಳು ನಿರಾಶ್ರಿತರ ವಸಾಹತೊಂದನ್ನು ಸ್ಥಾಪಿಸಿದ ವಿಷಯವನ್ನು ತಿಳಿಸುತ್ತವೆ. ಕೊನೆಯದಾಗಿ, ರಾಮನಾಥಪುರಂ ಜಿಲ್ಲೆಯ ವೇಲಂಗುಡಿಯಲ್ಲಿ ದೊರೆತ ಹಿಜಿರ ಶಕ ೭೩೬ (೧೩೩೫)ರ ಶಾಸನವು ಮುಸಲ್ಮಾನರ ದಂಡೆಯಾತ್ರೆಯ ಸಮಯ ದಲ್ಲಿ ಧೈರ್ಯದಿಂದ ಹೋರಾಡಿದ್ದಕ್ಕಾಗಿ ಕೊಟ್ಟ ಭೂದಾನವನ್ನು ಸೂಚಿಸುತ್ತದೆ.

## ೧೧

ಅರಾಬಿಕ್ ಮತ್ತು ಪರ್ಷಿಯನ್ ಶಾಸನಗಳ ವಿಷಯವಾಗಿ ಈ ಕೆಳಗೆ ಕಂಡ ವಿಷಯಗಳು ಮುಖ್ಯವಾದವು :—

ಮಾಮ್ಲುಕ್ (ಗುಲಾಮ) ವಂಶದ ಅನೇಕ ಶಾಸನಗಳು ನಾಗೌರ್ ಜಿಲ್ಲೆಯ ಬಡೀಖಟುವಿನಲ್ಲಿ ಕಂಡುಬಂದಿವೆ. ಇವುಗಳೆಲ್ಲೆಲ್ಲಾ ಪ್ರಾಚೀನವಾದುದು ೧೨೩೨ರ ಶಾಸನ. ಇಲ್ತಮಿಷ್‌ನ ಕಾಲದ ಈ ಶಾಸನವು ಒಂದು ಕೆರೆಯ ನಿರ್ಮಾಣವನ್ನು ತಿಳಿಸುತ್ತದೆ. ೧೨೬೮ರ ಘಿಯಾಸುದ್ದೀನ್ ಬಲ್ಬನ್‌ನ ಕಾಲಕ್ಕೆ ಸೇರಿದ, ಶಿಥಿಲವಾದ ಶಾಸನವೊಂದು ಸಿಕ್ಕಿದೆ. ಇದೇ ಸ್ಥಳದಲ್ಲಿ ದೊರೆತ ಫಿರೋಜ್‌ಷಾ ತುಗಲಕ್‌ನ ಆಳ್ವಿಕೆಯ ೧೩೬೦ರ ಶಾಸನದಿಂದ ಜಾತಿ ಕಲಹದಿಂದ ಆರು ಜನರು ಮಡಿದರೆಂದು ತಿಳಿದುಬರುತ್ತದೆ.

ಫಿರೋಜ್‌ಷಾ ತುಘಲಕ್‌ನ ಕಾಲದ ಕೆಲವು ಶಾಸನಗಳು ಉತ್ತರಪ್ರದೇಶದಲ್ಲಿ ಸಿಕ್ಕಿವೆ. ಜಾನ್‌ಪುರದ ೧೩೬೪ನೇ ಇಸ್ವಿಯ ಒಂದು ಶಾಸನವು ಹಾಗೂ ೧೩೬೩ನೇ ಇಸ್ವಿಯ ಬೇರೊಂದು ಶಾಸನ ಅಲಹಾಬಾದ್ ಸಂಗ್ರಹಾಲಯದಲ್ಲಿವೆ. ವಾರಣಾಸಿಯ ಎರಡು ಶಾಸನಗಳು ೧೩೭೫ನೇ ಇಸ್ವಿಗೆ ಸೇರಿವೆ. ಈ ಶಾಸನಗಳು ಮಸೀದಿಗಳ ನಿರ್ಮಾಣಕಾರ್ಯವನ್ನು ಸೂಚಿಸುತ್ತವೆ. ಇಬ್ರಾಹಿಂ ಷರ್ಕಿಕಾಲದ ಹರ್ದೋಯ್ ಜಿಲ್ಲೆಯ ಬಿಲ್‌ಗ್ರಾಮ್‌ನ ಶಾಸನದಲ್ಲಿ ಆ ಪಟ್ಟಣದಲ್ಲಿ ಜಮ್ಮಿ ಮಸೀದಿ ಕಟ್ಟಿದ ವಿಷಯವನ್ನು ತಿಳಿಸಲಾಗಿದೆ. ಇಬ್ರಾಹಿಂನ ಮಗ ಮಹಮೂದ್‌ನ ಆಳ್ವಿಕೆ ಕಾಲದ ಈ ಶಾಸನವು ೧೪೪೧–೪೨ಕ್ಕೆ ಸೇರಿದೆ.

ಕಳೆದ ವರ್ಷ ಬರ್ದವಾನ್ ಜಿಲ್ಲೆಯ ಕಲ್ನದಲ್ಲಿನ ಎರಡು ಶಾಸನಗಳನ್ನು ಕಲ್ಕತ್ತಾದ "ಇಂಡಿಯನ್ ಮ್ಯೂಸಿಯಂ" ಗೆ ಸಾಗಿಸಲಾಯಿತು. ಇವುಗಳಲ್ಲೊಂದು ಅಲ್ಲಾವುದ್ದೀನ್ ಹುಸೇನ್‌ಷಾನ ಕಾಲಕ್ಕೂ, ಮತ್ತೊಂದು ನಸ್ರತ್‌ಷಾನ ಮಗ ಅಲ್ಲಾವುದ್ದೀನ್ ಫಿರೋಜ್‌ಷಾನ ಕಾಲಕ್ಕೂ ಸೇರಿದೆ.

ಹಿಂದೆ ತಿಳಿಸಿದ ಬಡೀಖಟು ಎಂಬಲ್ಲಿ ಮುಂಚಿನ ಮೊಗಲರ ಮೂರು ಶಾಸನಗಳು ದೊರೆತಿವೆ. ಅವುಗಳನ್ನೆಲ್ಲಾ ಅಕ್ಬರನ ಸಭೆಯಲ್ಲಿದ್ದ ಪ್ರಖ್ಯಾತ ಸಾಹಿತ್ಯಕಾರನಾದ ಭಕ್ಕರ್‌ನ ಮೀರ್ ಮಹಮ್ಮದ್ ಮಸೂಮ್ ರಚಿಸಿದನು. ಅವುಗಳಲ್ಲೊಂದು ೧೬೦೧–೨ರಲ್ಲಿ ಮಹಮ್ಮದ್ ಮಸೂಮ್‌ನು ಆಗಿನ ಕಾಲದಲ್ಲಿ ಇರಾಕ್ ಎಂದು ಕರೆಯಲ್ಪಡುತ್ತಿದ್ದ ಇರಾನ್ ದೇಶಕ್ಕೆ ರಾಯಭಾರಿಯಾಗಿ ತೆರಳುವಂತೆ ಅಕ್ಬರನ ಒಪ್ಪಿಗೆ ಪಡೆದಿದ್ದನೆಂದು ತಿಳಿಸುತ್ತದೆ.

## ಇತರ ಸಂಶೋಧನೆಗಳು.

೧೯೫೮–೫೯ರಲ್ಲಿ ಪ್ರಾಚ್ಯವಸ್ತು ಪರಿಶೋಧನೆ ನಡೆಸಿದ್ದರ ಫಲಿತಾಂಶವಾಗಿ ಹಾಗೂ ಆಕಸ್ಮಿಕವಾಗಿಯೂ ಅನೇಕ ಪ್ರಾಚೀನಾವಶೇಷಗಳು ದೊರೆತಿವೆ. ಅವುಗಳಲ್ಲಿ ಕೆಲವನ್ನು ಈ ಕೆಳಗೆ ತಿಳಿಸಲಾಗಿದೆ:—

೧

ಪ್ರಥಮಾವಳಿಯ ಪ್ರಾಚ್ಯ ಶಿಲಾಯುಧಗಳು ಈ ಕೆಳಗೆ ಹೇಳಿದ ಸ್ಥಳಗಳಲ್ಲಿ ದೊರೆತಿವೆ. ಬುಂದೇಲ್ ಖಂಡದಲ್ಲಿ ಕೆನ್ ನದಿಯ ಉಪನದಿಗಳಾದ ಸೋನಾರ್, ಕೋಪ್ರ ಮತ್ತು ಬಿಯರ್ಮ ಪಾತ್ರಗಳು; ಪ್ರಾಣಿಗಳ ಅಶ್ಮೀಭೂತಾವಶೇಷಗಳು ದೊರೆಯುವ ನರ್ಮದಾನದಿಯ ಮೇಲ್ಭಾಗ; ಗ್ವಾಲಿಯರ್, ಮಂಡಸೋರ್, ಇಂದೋರ್, ಜಬ್ಬಲ್‌ಪುರ, ಚಾಂದಾ ಮತ್ತು ಅಮರಾವತಿ ಜಿಲ್ಲೆಗಳು; ದಕ್ಷಿಣ ರಾಜಸ್ಥಾನದಲ್ಲಿ ಲೂಣಿ, ಬನಾಸ್ ನದಿಗಳ ಹಾಗೂ ಉಪನದಿಗಳ ಪಾತ್ರಗಳೂ; ಸಬರ್‌ಕಾಂಠಾ ಜಿಲ್ಲೆ; ಪಶ್ಚಿಮ ಖಾನ್‌ದೇಶ್ ಜಿಲ್ಲೆಯಲ್ಲಿ ತಪತೀ ನದೀ ಪಾತ್ರ; ಕೆಯಿಂನ್‌ಜ್ಹರ್, ಧೆಂಕನಾಲ್ ಮತ್ತು ಮಯೂರ್‌ಭಂಜ್ ಜಿಲ್ಲೆಗಳೂ; ಕರ್ನೂಲ್ ಜಿಲ್ಲೆಯಲ್ಲಿ ಗುಂಡ್ಲಕನ್ನ ನದಿ ಪಾತ್ರ, ಇವೇ ಮೊದಲಾದುವುಗಳು. ಶಿವಾಲಿಕ್ ಪರ್ವತಗಳ ತಪ್ಪಲಿನ ಹೊಷಿಯಾರ್‌ಪುರ್ ಮತ್ತು ಬಿಲಾಸ್‌ಪುರ ಜಿಲ್ಲೆಗಳಲ್ಲಿ ಪ್ರಾಣಿಗಳ ಅಶ್ಮೀಭೂತಾವಶೇಷಗಳು ಕಂಡುಬಂದಿವೆ.

ದ್ವಿತೀಯಾವಳಿಯ ಆಯುಧಗಳು ಇನ್ನೂ ಹೆಚ್ಚು ಸ್ಥಳಗಳಲ್ಲಿ ದೊರೆತಿವೆ. ಆದರೆ ನರ್ಮದಾದಂಡೆ ಮೇಲಿರುವ ಮಹೇಶ್ವರ ಮೊದಲಾದ ಕೆಲವು ಸ್ಥಳಗಳಲ್ಲಿ ಮಾತ್ರ ಪ್ರಥಮಾವಳಿ ಮತ್ತು ದ್ವಿತೀಯಾವಳಿ ಆಯುಧಗಳೆರಡೂ ಸಿಕ್ಕಿವೆ. ಮಧ್ಯಪ್ರದೇಶ, ರಾಜಸ್ಥಾನ ಮತ್ತು ಬೊಂಬಾಯಿ ಪ್ರಾಂತಗಳಲ್ಲಿ ಮೇಲೆ ತಿಳಿಸಿದ ಸ್ಥಳಗಳಲ್ಲಿಯೂ ಮತ್ತು ಕೆಳಗೆ ಕಂಡ ಪ್ರದೇಶಗಳಲ್ಲಿಯೂ ದೊರೆಯುತ್ತವೆ. ಸೌರಾಷ್ಟ್ರದಲ್ಲಿ ಭಾದರ್ ಮತ್ತು ಗೋಮಾ ನದಿಗಳ ಪಾತ್ರಗಳು, ಅಹ್ಮದ್‌ನಗರ್ ಜಿಲ್ಲೆಯ ಪೂಲ ಮತ್ತು ಅದರ ಉಪನದಿಗಳ ಬಯಲು, ಬಿಜಾಪುರ ಜಿಲ್ಲೆ, ಕೆಯಿಂಜ್ಹರ್ ಮತ್ತು ಮಯೂರ್ಭಂಜ್ ಜಿಲ್ಲೆಗಳಲ್ಲಿ ಖೇಡ್‌ಕಯ್ ಮತ್ತಿತರ ನದಿಪಾತ್ರಗಳು, ಮೆಡಕ್ ಮತ್ತು ಕರ್ನೂಲ್ ಜಿಲ್ಲೆಗಳು.

ನೂತನ ಶಿಲಾಯುಧಗಳು ಮಯೂರ್‌ಭಂಜ್, ಕೆಯಿಂಜ್ಹರ್, ಧೆಂಕನಲ್, ಧಾರವಾಡ ಮತ್ತು ಮೈಸೂರು ಜಿಲ್ಲೆಗಳಲ್ಲಿ ಕಂಡುಬಂದಿವೆ. ದಕ್ಷಿಣ ರಾಜಸ್ಥಾನದಲ್ಲೂ ಮತ್ತು ಆಗ್ರ, ಇಂದೋರ್, ಜಬ್ಬಲ್‌ಪುರ, ಸಾಗರ್, ಪೂರ್ವ ಹಾಗೂ ಪಶ್ಚಿಮ ನಿಮಾರ್, ಬನಾಸ್‌ಕಾಂಠ, ಝಾಲಾವಾಡ್, ಖೇಡ, ಮಧ್ಯಸೌರಾಷ್ಟ್ರ, ಅಹ್ಮದ್‌ನಗರ, ಕೆಯೆಂಜ್ಹರ್, ಪೂರಿ ಹಾಗೂ ಕರ್ನೂಲ್ ಜಿಲ್ಲೆಗಳಲ್ಲಿ ಸಿಕ್ಕುವ ಸೂಕ್ಷ್ಮ ಶಿಲಾಯುಧಗಳೊಂದಿಗೆ ಮೃತ್ಪಾತ್ರೆಗಳು ದೊರೆಯುವುದಿಲ್ಲ.

ಸಾಗರ್ ಜಿಲ್ಲೆಯಲ್ಲಿ ಚಿತ್ರಿತ ಗುಹಾಶ್ರಯವನ್ನು ಕಂಡುಹಿಡಿಯಲಾಗಿದೆ. ಮಂಡಸೋರ್ ಜಿಲ್ಲೆಯಲ್ಲಿಯೂ ಸಹ ಅನೇಕವಾಗಿವೆ.

೨

ಮಧ್ಯಸೌರಾಷ್ಟ್ರ ಜಿಲ್ಲೆಯಲ್ಲಿ ಸುಮಾರು ಹನ್ನೆರಡು ಹರಪ್ಪಾ ವಸತಿಗಳನ್ನು ಕಂಡು ಹಿಡಿಯಲಾಗಿದೆ. ಅವುಗಳ ಪೈಕಿ ಒಂದರಲ್ಲಿ ಸಮಾಧಿಗಳು ಕಂಡುಬಂದಿದೆ. ಈ ರೀತಿಯ ಇನ್ನೊಂದು ವಸತಿಯು ಹಲಾರ್ ಜಿಲ್ಲೆಯಲ್ಲಿ ಗೋಚರವಾಗಿದೆ.

ಉತ್ತರದಲ್ಲಿ ಭಾಟಿಂಡ ಜಿಲ್ಲೆಯಲ್ಲಿ ಒಂದು ಹರಪ್ಪ ವಸತಿ ಗೋಚರವಾಗಿದೆ.

ಸೂಕ್ಷ್ಮ ಶಿಲಾಯುಧ, ಚಿತ್ರಿತ ಕೆಂಪು ಮೃತ್ಪಾತ್ರೆಗಳು ಅಥವಾ ಕಪ್ಪು ಮಿಶ್ರಿತ ಕೆಂಪು ಮೃತ್ಪಾತ್ರೆಗಳನ್ನೊಳಗೊಂಡ ತಾಮ್ರ ಶಿಲಾಯುಗದ ವಸತಿಗಳು ಕೆಳಗೆ ತಿಳಿಸಿದಂತೆ ಕಂಡು ಬಂದಿವೆ. ಬನಾಸ್ ಮತ್ತು ಅದರ ಉಪನದಿಗಳ ಮೈದಾನಗಳಲ್ಲಿಯೂ (ನೈರುತ್ಯ ರಾಜಸ್ಥಾನ) ಜಯಪುರ, ಇಂದೋರ್, ಮಂಡಸೋರ್ ಮತ್ತು ಬ್ರೋಚ್ ಜಿಲ್ಲೆ, ಪಶ್ಚಿಮ ಖಾನ್ದೇಶದಲ್ಲಿರುವ ತಪತಿ ನದಿಯ ಪಾತ್ರ, ನಾಸಿಕ್, ಅಹ್ಮದ್‌ನಗರ ಮತ್ತು ಬಿಜಾಪುರ ಜಿಲ್ಲೆಗಳೂ, ದಕ್ಷಿಣದಲ್ಲಿ ಮಧುರೆ ಜಿಲ್ಲೆಯಲ್ಲೂ ಕೂಡ ಸಿಕ್ಕಿವೆ.

ಚಿತ್ರಿತ ಕಂದು ಮೃತ್ಪಾತ್ರೆಗಳು ಅಜ್ಮೀರ್, ಜಯಪುರ ಮತ್ತು ಭಿಂಡ್ ಜಿಲ್ಲೆಗಳಲ್ಲಿಯೂ ಮತ್ತು ಗಂಗಾನದಿಯ ಮೇಲ್ಭಾಗದಲ್ಲಿ ಗುರುತಿಸಿರುವ ಅನೇಕ ಪ್ರಾಚೀನ ಸ್ಥಳಗಳಲ್ಲಿ ಕಂಡು ಬಂದಿವೆ.

೭

ಬೃಹತ್ ಶಿಲಾ ಗೋರಿಗೆ ಸಂಬಂಧಿಸಿದ ಶಿಲಾವೃತ್ತಗಳು (Stone Circles) ಹೈದರಾಬಾದ್ ಜಿಲ್ಲೆ ಕೊಯಿಸರಾಮ್ ಮತ್ತು ಬಾಲಾಜಿಗುತ್ತದಲ್ಲಿ ಸಿಕ್ಕಿವೆ. ವರ್ತುಲ ಶಿಲಾರಾಶಿಗಳೂ (Cairn Circles) ಟೋಪಿಕಲ್ಲುಗಳು (Dolmens), ಹಾಗೂ ಮೃತ್ಪಾತ್ರ ಸಮಾಧಿಗಳು (Urn-burials) ಕೊಯಿಮತ್ತೂರು, ಧಾರವಾಡ ಮತ್ತು ದಕ್ಷಿಣ ಆರ್ಕಾಟ್ ಜಿಲ್ಲೆಯಲ್ಲಿ ಸಿಕ್ಕಿವೆ.

೮

ಮಣ್ಣಿನ ಸ್ತೂಪದ ಅವಶೇಷಗಳು ಭಾಗಲ್ಪುರ ಜಿಲ್ಲೆಯ ನಾಥ್‌ನಗರದಲ್ಲಿಯೂ, ಶರಣ್ ಜಿಲ್ಲೆಯ ಚಿರಾಂದ್‌ನಲ್ಲಿಯೂ ಕಂಡುಹಿಡಿಯಲ್ಪಟ್ಟಿವೆ.

ಔರಂಗಾಬಾದ್ ಜಿಲ್ಲೆಯ ಪಿತಲ್‌ಖೋರಾ ಬೌದ್ಧ ಗುಹಾಲಯಗಳಲ್ಲಿ ಕ್ರಿ.ಪೂ. ೧ನೇ ಮತ್ತು ೨ನೇ ಶತಮಾನಗಳ ಅನೇಕ ವಿಗ್ರಹಗಳೂ ಮತ್ತು ಸ್ಫಟಿಕದ ಭರಣಿಗಳೂ ದೊರೆತಿವೆ. ಮಧ್ಯಸೌರಾಷ್ಟ್ರ ಜಿಲ್ಲೆಯಲ್ಲಿ ಖಂಬಾಲಿಯ ಎಂಬಲ್ಲಿ ಬೌದ್ಧ ಗುಹಾಲಯಗಳು ಕಂಡುಹಿಡಿಯಲ್ಪಟ್ಟವು.

ಪಶ್ಚಿಮ ಖಾನ್ದೇಶದಲ್ಲಿ ಮೊಹಿದ-ತರ್ಫ್-ಹವೇಲಿ ಎಂಬ ಸ್ಥಳದಲ್ಲಿ ಜೈನ ಗುಹಾಲಯಗಳು ಗೋಚರವಾಗಿವೆ. ಗೋಮೈ ನದಿ ದಂಡೆಯ ಶಿಲಾಗರ್ಭದಲ್ಲಿ ಕೊರೆಯಲ್ಪಟ್ಟ ಈ ಗುಹಾಲಯಗಳು ನೀರಿನಿಂದ ತುಂಬಿರುತ್ತವೆ.

ಭಿಲ್ಸ ಜಿಲ್ಲೆಯ ಬಧರ ಮತ್ತು ಪಠ್ಸೂರದಲ್ಲಿ ಹಾಗೂ ಝಾನ್ಸಿ ಜಿಲ್ಲೆಯ ದೇವಘಢದ ಸಮೀಪದಲ್ಲಿ ಗುಪ್ತರ ಮತ್ತು ಅನಂತರದ ದೇವಾಲಯಗಳು ಹಾಗೂ ವಿಗ್ರಹಗಳು ದೊರೆತಿವೆ.

# ಸಂಗ್ರಹಾಲಯಗಳು

ಸಂಗ್ರಹಾಲಯಗಳಿಗೆ ಸೇರಿಸಿದ ಅಮೂಲ್ಯವಾದ ಪ್ರಾಚೀನಾವಶೇಷಗಳಲ್ಲಿ ಕೆಲವನ್ನು ಈ ಕೆಳಗೆ ತಿಳಿಸಿದೆ.

೧. ನವದೆಹಲಿಯ ರಾಷ್ಟ್ರೀಯ ಸಂಗ್ರಹಾಲಯವು ದಕ್ಷಿಣ ಭಾರತ ಶಿಲ್ಪಶೈಲಿಗೆ ಸೇರಿದ ಅನೇಕ ಶಿಲಾ ವಿಗ್ರಹಗಳನ್ನು, ಕೈಬರಹದ ಪುಸ್ತಕಗಳನ್ನು ಮತ್ತು ನಾಣ್ಯಗಳನ್ನು ತೆಗೆದು ಕೊಂಡಿತು. ಕಲ್ಕತ್ತ ಭಾರತೀಯ ಸಂಗ್ರಹಾಲಯಕ್ಕೆ ಛೋಟಾ ನಾಗಪುರದ ಪ್ರಾಚ್ಯ ಶಿಲಾ ಯುಧಗಳನ್ನು, ಇಪ್ಪತ್ತನಾಲ್ಕು ಪರಿಗಣಗಳಲ್ಲಿರುವ ಹರಿನಾರಾಯಣಪುರದ ಪ್ರಾಚೀನ ಮೃತ್ಪಾತ್ರೆಗಳನ್ನು, ನೇಪಾಳದ ಕಂಚಿನ ವಿಗ್ರಹವೊಂದನ್ನು ಮತ್ತು ಅನೇಕ ನಾಣ್ಯಗಳನ್ನು ಸೇರಿಸಲಾಯಿತು.

೨. ೧೧೫೨–೫೩ರ ತೀರ್ಥಂಕರ ವಿಗ್ರಹವನ್ನು ಅಜ್ಮೀರ್‌ನ ರಾಜಪುತಾನ ಸಂಗ್ರಹಾಲಯಕ್ಕೆ ಸೇರಿಸಲಾಯಿತು. ಬರೋಡಾ ಸಂಗ್ರಹಾಲಯಕ್ಕೆ ಸಬರ್‌ಕಂಠಾ ಜಿಲ್ಲೆಯಲ್ಲಿ ದೊರೆತ ಬ್ರಾಹ್ಮಣಮತದ ವಿಗ್ರಹಗಳನ್ನು, ಒರಿಸ್ಸಾ ಪ್ರಾಂತದ ಭುವನೇಶ್ವರದ ಸಂಗ್ರಹಾಲಯಕ್ಕೆ ಅನೇಕ ಬೌದ್ಧ ಮತ್ತು ಜೈನ ವಿಗ್ರಹಗಳನ್ನು ಹಾಗೂ ತಾಮ್ರ ಶಾಸನಗಳನ್ನು ಸೇರಿಸಲಾಯಿತು. ಬೊಂಬಾಯಿನ ಪ್ರಿನ್ಸ್ ಆಫ್ ವೇಲ್ಸ್ ಸಂಗ್ರಹಾಲಯಕ್ಕೆ ಬಾರ್ಹೂತ್ ಸಮೀಪದಲ್ಲಿದ್ದ ಸ್ತೂಪದ ಕಟಕಟೆಯನ್ನು ಸಾಗಿಸಲಾಯಿತು. ಲಕ್ನೋ ಸಂಸ್ಥಾನಸಂಗ್ರಹಾಲಯದಲ್ಲಿ ಉತ್ತರ ಪ್ರದೇಶದ ಅನೇಕ ಸ್ಥಳಗಳಲ್ಲಿ ದೊರೆತ ನೂತನ ಶಿಲಾಯುಧಗಳು, ಶಿಲಾವಿಗ್ರಹಗಳೂ, ಮಣ್ಣಿನ ಮೂರ್ತಿಗಳೂ, ಮಣಿಗಳೂ, ಮೃತ್ಪಾತ್ರೆಗಳೂ ಮತ್ತು ಇಟ್ಟಿಗೆಗಳು ಶೇಖರಿಸಲ್ಪಟ್ಟಿವೆ. ನೂರಾರು ನಾಣ್ಯಗಳನ್ನು ಕೂಡ ಸೇರಿಸಲಾಗಿದೆ. ಗೌಹತಿ ಸಂಸ್ಥಾನ ಸಂಗ್ರಹಾಲಯಕ್ಕೆ ವಿಷ್ಣುವಿನ ಮಣ್ಣಿನ ಮೂರ್ತಿಯೊಂದನ್ನೂ ಶಿಲಾ ವಿಗ್ರಹವೊಂದನ್ನೂ ಮತ್ತು ಅಹೋಂ ನಾಣ್ಯಗಳನ್ನೂ ಸೇರಿಸಲಾಯಿತು. ಷಾಹಾಬಾದ್ ಜಿಲ್ಲೆಯ ಚೇಲ ಎಂಬಲ್ಲಿ ದೊರೆತ ದೇವಿಯ ಕಂಚಿನ ಮೂರ್ತಿಯೊಂದನ್ನು ಪಾಟ್ನ ಸಂಗ್ರಹಾಲಯಕ್ಕೆ ತೆಗೆದುಕೊಳ್ಳಲಾಯಿತು. ಬ್ರಾಹ್ಮಣ ಮತ್ತು ಬೌದ್ಧಮತಗಳಿಗೆ ಸೇರಿದ ವಿಗ್ರಹಗಳನ್ನು ಬಿಹಾರದ ಅನೇಕ ಸ್ಥಳಗಳಿಂದಲೂ, ಕಂಚಿನ ವಿಗ್ರಹಗಳನ್ನು ನೇಪಾಲದಿಂದಲೂ ದರ್ಭಂಗದಲ್ಲಿರುವ ಚಂದ್ರಧಾರಿ ಸಂಗ್ರಹಾಲಯ ಸೇರಿಸಿಕೊಂಡಿತು.

ಬೃಹತ್‌ಶಿಲಾ ಗೋರಿಯ ಮೃತ್ಪಾತ್ರೆಗಳನ್ನು, ವಿಷ್ಣು, ಭೂದೇವಿ ಮತ್ತು ಶ್ರೀದೇವಿಯನ್ನೊಳಗೊಂಡ ಅನೇಕ ವಿಗ್ರಹಗಳನ್ನು ಹಾಗೂ ಲೋಹದ ವಿಗ್ರಹಗಳನ್ನು ಮದ್ರಾಸ್ ಸರ್ಕಾರಿ ಸಂಗ್ರಹಾಲಯವು ಸಂಗ್ರಹಿಸಿತು. ಇವುಗಳಲ್ಲದೆ ಮುಖ್ಯವಾದ ನಾಣ್ಯಗಳನ್ನು ಸೇರಿಸಲಾಯಿತು.

ಕಲ್ಕತ್ತಾದ ಅಷುತೋಷ್ ಸಂಗ್ರಹಾಲಯ ಮಣ್ಣಿನ ವಿಗ್ರಹಗಳನ್ನೂ, ಆದಿ ಐತಿಹಾಸಿಕ ಮೃತ್ಪಾತ್ರೆಗಳನ್ನೂ, ಪಶ್ಚಿಮ ಬಂಗಾಲದ ಅನೇಕ ಸ್ಥಳಗಳಿಂದ ಶಿಲಾ ಹಾಗೂ ಲೋಹದ ವಿಗ್ರಹಗಳನ್ನು ಮತ್ತು ನಾಣ್ಯಗಳನ್ನು ಶೇಖರಿಸಿತು.

ಅಲಹಾಬಾದ್ ಸಂಗ್ರಹಾಲಯ ಆದಿ ಐತಿಹಾಸಿಕ ಮುದ್ರೆ ಹಾಗೂ ಮಣ್ಣಿನ ಪಾತ್ರೆಗಳನ್ನು ಉತ್ತರ ಪ್ರದೇಶದ ವಿವಿಧ ಭಾಗಗಳಿಂದ ವಶಪಡಿಸಿಕೊಂಡಿತು. ಭರತ್‌ಪುರ ಜಿಲ್ಲೆಯ ನೋಹ್ ಎಂಬ ದೊರೆತ ವಿನೋದಕರವಾದ ಕುಷಾಣ ವಿಗ್ರಹವನ್ನು ಅಂಬರ್ ಸಂಗ್ರಹಾಲಯದಲ್ಲಿಡಲಾಗಿದೆ. ಖಾಜುರಾಹೊ ಪುರಾತತ್ವಸಂಗ್ರಹಾಲಯಕ್ಕೆ ಸುಂದರವಾದ ಉಮಾ–ಮಹೇಶ್ವರ ಮೂರ್ತಿಯನ್ನು ಸೇರಿಸಲಾಯಿತು.

## ಸ್ಮಾರಕಗಳ ಸಂರಕ್ಷಣೆ

ಪುರಾತತ್ವ ಇಲಾಖೆಯು ರಾಷ್ಟ್ರೀಯ ಪ್ರಾಮುಖ್ಯತೆಯುಳ್ಳ ನೂರಾರು ಸ್ಮಾರಕಗಳ ಉಸ್ತುವಾರಿಯನ್ನು ವಾರ್ಷಿಕ ಹಾಗೂ ವಿಶೇಷ ದುರಸ್ತು ಮೂಲಕ ನಡೆಸಿತು. ಅವುಗಳಲ್ಲಿ ಕೆಲವನ್ನು ಮಾತ್ರ ತಿಳಿಸಲಾಗಿದೆ. ಕೆಲವು ಸಂಸ್ಥಾನಗಳು ತಮ್ಮ ಉಸ್ತುವಾರಿಯಲ್ಲಿರುವ ಸ್ಮಾರಕಗಳನ್ನು ರಿಪೇರಿ ಮಾಡಿದವು.

೧. ಮಧ್ಯವರ್ತಿ ಮಂಡಲವು ಧಾರ್‌ಜಿಲ್ಲೆಯಲ್ಲಿರುವ ಬಾಘ್ ಗುಹಾಲಯಗಳ ೪,೫,೭ನೆ ಗುಹೆಗಳ ಮೇಲ್ಛಾವಣಿಯ ಮೇಲಿದ್ದ ಮಳೆ ನೀರನ್ನು ಹೀರುವಂತ ಮೃದುವಾದ ಕಲ್ಲು ಮತ್ತು ಮಣ್ಣನ್ನು ಕಿತ್ತುಹಾಕಿ, ಕಲ್ಲಿನ ಗಟ್ಟಿಭಾಗವನ್ನು ಹೊರಗೆಡಹಲಾಯಿತು. ಇದರ ಫಲಿತಾಂಶವಾಗಿ ಗುಹಾಲಯಗಳಲ್ಲಿ ನೀರು ಸೇರುವುದು ಬಹುಮಟ್ಟಿಗೆ ಕಡಿಮೆಯಾಗಿದೆ. ಪೂರ್ವ ನೀಮಾರ್ ಜಿಲ್ಲೆಯಲ್ಲಿ ಬುರಾನ್‌ಪುರ್ ಸ್ತಂಭದ ರಿಪೇರಿ ಮುಂದೊರೆಯಿತು. ಕ್ಷೀಣಿಸಿದ ಮುಂಭಾಗದ ಕಲ್ಲುಗಳ ಬದಲು ಉತ್ತಮವಾದ ಕಲ್ಲುಗಳನ್ನು ಹಾಕಲಾಯಿತು. ಸುತ್ತಲಿರುವ ಗೋಡೆಗೂ ಮತ್ತು ಮಧ್ಯದಲ್ಲಿರುವ ಸ್ತಂಭಕ್ಕೆ ಜೋಡಣೆಯಾಗುವಂತೆ ಕೂಡಿಸಬೇಕಾಗಿದೆ.

೨. ಪೂರ್ವಮಂಡಲವು ಸಿಬ್‌ಸಾಗರ್‌ಜಿಲ್ಲೆಯ ಜಯಸಾಗರ್‌ನಲ್ಲಿರುವ ಕರೆಂಡ್ ಅರಮನೆಯನ್ನು ರಿಪೇರಿ ಮಾಡಲಾಯಿತು. ಮಣ್ಣಿನಿಂದ ಮುಚ್ಚಲ್ಪಟ್ಟ ಕೆಲವು ಭಾಗಗಳನ್ನು ಬೆಳಕಿಗೆ ತರಲಾಯಿತು. ೧೭೫೭–೫೮ರಲ್ಲಿ ಅಗೆದ ಕಟಕ್ ಜಿಲ್ಲೆಯಲ್ಲಿರುವ ರತ್ನಗಿರಿ ಸ್ತೂಪದಲ್ಲಿ ನೀರು ಹೋಗದಂತೆ ದುರಸ್ತು ಮಾಡಿದ್ದಲ್ಲದೆ ಬಿದ್ದುಹೋದ ಮುಂಭಾಗವನ್ನು ಕಟ್ಟಲಾಯಿತು. ಸ್ತೂಪದ ಬಿದ್ದುಹೋದ ವಸ್ತುಗಳಿಂದಲೇ ಅದನ್ನು ಪುನರ್ರಚಿಸಲಾಯಿತು.

ಪೂರಿ ಜಿಲ್ಲೆಯ ಕೊನಾರಕ್ ಸೂರ್ಯಮಂದಿರದ ಒಳಭಾಗದಲ್ಲಿ ತೂತುಗಳನ್ನು ಕೊರೆದು ನೀರಾದ ಸಿಮೆಂಟನ್ನು ತುಂಬಿ ಕಟ್ಟಡವನ್ನು ಘಟ್ಟಿಯಾಗಿಯೂ, ಮೇಲ್ಛಾವಣಿ ಸೋರದಂತೆಯೂ ನೋಡಿಕೊಳ್ಳಲು ದುರಸ್ತು ಕೆಲಸವನ್ನು ಪ್ರಾರಂಭಿಸಿದೆ.

ಪಶ್ಚಿಮ ಬಂಗಾಲದಲ್ಲಿ ಕೆಲವು ಸ್ಮಾರಕಗಳ ರಿಪೇರಿ ಮಾಡಲಾಯಿತು. ಮಾಲ್ಡ ಜಿಲ್ಲೆಯ ಗೌಡ್ ಮತ್ತು ಪಾಂಡು ಎಂಬಲ್ಲಿಯೂ, ಹಾಗೂ ಮುರ್ಷಿದಾಬಾದಿನಲ್ಲಿಯೂ ಈ ರೀತಿಯ ಕೆಲಸಗಳು ಕೈಗೊಳ್ಳಲ್ಪಟ್ಟಿವೆ. ಭೂಕಂಪದಿಂದ ಬಿದ್ದುಹೋಗಿದ್ದ ಮುರ್ಷದ್‌ಕುಲಿಖಾನ್ ಮಸೀದಿಯ ಗುಮ್ಮಟದ ಅರ್ಧಭಾಗವನ್ನು ಪುನರ್ರಚಿಸಿದೆ. ತ್ರಿಪುರ ಜಿಲ್ಲೆ ಉದಯಪುರದಲ್ಲಿರುವ ಗಣಪತಿ ದೇವಾಲಯಗಳೂ ದುರಸ್ತು ಮಾಡಲ್ಪಟ್ಟವು.

೩. ಮಧ್ಯಪೂರ್ವ ಮಂಡಳದಲ್ಲಿ ವಾರಣಾಸಿ ಜಿಲ್ಲೆಯ ಸಾರ್ನಾಥ್‌ದಲ್ಲಿ ಧಮೇಖ್‌ಸ್ತೂಪದ ಪೀಠ ಮತ್ತು ಮುಖ್ಯ ದೇವಾಲಯದಲ್ಲಿರುವ ಕೆಲವು ಕಟ್ಟಡಗಳು ರಿಪೇರಿ ಮಾಡಲ್ಪಟ್ಟವು. ಪಾಟ್ನಾ ಜಿಲ್ಲೆಯ ನಲಂದಾದಲ್ಲಿ ೫ರಿಂದ ೮ನೇ ಸೈಟ್‌ಗಳಲ್ಲಿ ಕ್ಷಾರದಿಂದ ಕ್ಷೀಣಿಸಿದ ಇಟ್ಟಿಗೆಗಳನ್ನು ಭದ್ರಪಡಿಸಿ ಕಟ್ಟಲಾಯಿತು. ಅದೇ ಜಿಲ್ಲೆಯ ರಾಜಗೃಹದಲ್ಲಿ ಉತ್ತರ ದ್ವಾರದ ಕೆಲಭಾಗ ಮತ್ತು ಹೊಸ ಕೋಟೆಯ ಗೋಡೆಯನ್ನು ದುರಸ್ತು ಮಾಡಿಸಲಾಯಿತು.

೪. ಉತ್ತರ ಮಂಡಲವು ಛತರ್‌ಪುರ್ ಜಿಲ್ಲೆಯಲ್ಲಿರುವ ಖಾಜುರಾಹೋ ಮಂದಿರಗಳಿಗೆ ಗಮನವನ್ನು ಕೊಟ್ಟಿದೆ. ಪಾಟ್ನ ಜಿಲ್ಲೆಯ ನಾಚ್ನ ಕುಠಾರದಲ್ಲಿರುವ ಗುಪ್ತರ ಕಾಲದ ದೇವಾಲಯದ ಸುತ್ತಲೂ ಅಗೆದು ಜಗುಲಿಯ ಕೆಳಭಾಗವನ್ನು ಬೆಳಕಿಗೆ ತರಲಾಯಿತು.

ಆಗ್ರಾ ಕೋಟೆಯಲ್ಲಿ ನೌಬತ್‌ಖಾನೆಯ ಪಶ್ಚಿಮ ಕೋಣೆಯಲ್ಲಿ ಗುಲ್ದಸ್ತ ಮೇಲ್ಛಾಗವು ಮೊದಲನಂತೆ ಪುನಃ ಕಟ್ಟಲ್ಪಟ್ಟಿತು. ನೌಬತ್‌ಖಾನೆಯ ಉತ್ತರ ಕಮಾನಿನ ಒಳಭಾಗದಲ್ಲಿ ಚಿತ್ರಗಳು ಕಂಡುಬಂದಿವೆ. ಮೋತಿ ಮಸೀದಿಯು ಬಿದ್ದುಹೋದ ಭಾಗಗಳನ್ನು ಪುನಃ ಕಟ್ಟಿಸುವ ಕಾರ್ಯವನ್ನು ಕೈಗೊಂಡಿದೆ.

ಆಗ್ರಾದ ತಾಜ್‌ಮಹಲ್‌ನ ತಳಪಾಯವನ್ನು ಅಗೆದಾಗ ಈ ತಳಪಾಯವು ಭಾವಿಗಳ ಹಾಗಿರುವ ಕಟ್ಟಡಗಳ ಮೇಲೆ ನಿಂತಿರುವುದಾಗಿ ಕಂಡುಬಂದಿದೆ. ಈಶಾನ್ಯ ದಿಕ್ಕಿನಲ್ಲಿರುವ ಸ್ಮಾರಕದ ಮಿನಾರೆಟ್‌ನ್ನು ರಿಪೇರಿ ಮಾಡಲು ಪ್ರಾರಂಭಿಸಲಾಗಿದೆ.

ಆಗ್ರಾ ಜಿಲ್ಲೆಯ ಫತೇಪುರ್ ಸಿಕ್ರಿಯಲ್ಲಿರುವ ಅನೇಕ ಸ್ಮಾರಕಗಳು ಅವಶ್ಯಕತಾನುಸಾರ ರಿಪೇರಿ ಮಾಡಲ್ಪಟ್ಟವು. ಅದೇ ಜಿಲ್ಲೆ ಸಿಕಂದ್ರದಲ್ಲಿ ಅಕ್ಬರನ ಸಮಾಧಿಯಲ್ಲಿ ಬಿರುಕುಬಿಟ್ಟ ಕಮಾನುಗಳನ್ನು ಸರಿಪಡಿಸಲಾಗುತ್ತಿದೆ.

೫. ವಾಯುವ್ಯ ಮಂಡಲದಲ್ಲಿ ದೆಹಲಿ ಜುಮ್ಮಾ ಮಸೀದಿಯ ಮುಖ್ಯ ರಿಪೇರಿ ಕೆಲಸ ಮುಂದುವರಿಸಲ್ಪಟ್ಟಿತು. ಸವೆದ ಕಲ್ಲುಗಳ ಬದಲು ಹೊಸಕಲ್ಲುಗಳನ್ನು ಜೋಡಿಸಲಾಯಿತು. ರಂಧ್ರಗಳನ್ನು ಮತ್ತು ಕಲ್ಲುಗಳ ಬಿರುಕುಗಳನ್ನು ಮುಚ್ಚುವುದಲ್ಲದೆ, ಮೇಲ್ಛಾವಣಿ ಮೇಲಿನ ಪುಡಿಯಾಗಿ ಹೋದ ಗಾರೆಯನ್ನು ತೆಗೆದುಹಾಕಿದೆ. ಕೆಂಪುಕೋಟೆಯಲ್ಲಿರುವ ರಂಗಮಹಲ್ ದಿವಾನ್-ಇ-ಅಮ್ ಮತ್ತು ಖಾಸ್‌ಮಹಲ್‌ಗಳ ರಿಪೇರಿಯೂ ನಡೆಯಿತು. ದೆಹಲಿ ಲಾಲ್‌ಕೋಟೆ ...ಸ್ತೆ ಪಕ್ಕದ ಬಿದ್ದುಹೋದಗೋಡೆಗಳನ್ನು ಸರಿಪಡಿಸಿದ್ದಲ್ಲದೆ, ಕಲ್ಲು ಮಣ್ಣನ್ನು ತೆಗೆದು ಚೊಕ್ಕಟ ಪಡಿಸಲಾಯಿತು. ನವದೆಹಲಿಯ ಕೊಟ್ಲಾ ಫಿರೋಜ್‌ಷಾ ಸ್ಮಾರಕದಲ್ಲಿ ಅಶೋಕ ಸ್ತಂಭವಿರುವ ಸೋಪ್ಯಾಗ್ರ ಕಟ್ಟಡಕ್ಕೂ ಪೂರ್ವದಿಕ್ಕಿನ ಪ್ರಾಕಾರದ ಗೋಡೆಗೂ ಮಧ್ಯದ ಅಂಗಣದ ಮೊದಲಿನ ನೆಲಮಟ್ಟದವರೆಗೆ ಅಗೆಯಲಾಯಿತು.

೬. ಆಗ್ನೇಯಮಂಡಲ ಚಿತ್ತೂರ್ ಜಿಲ್ಲೆಯ ಚಂದ್ರಗಿರಿಯಲ್ಲಿ ರಾಜಾಮಹಲ್ ಮತ್ತು ರಾಣಿಮಹಲ್‌ಗಳಲ್ಲಿಯೂ, ಕಡಪಜಿಲ್ಲೆಯ ಸಿದ್ಧವಟ್ಟಂನಲ್ಲಿರುವ ಕೋಟೆ ಮತ್ತು ಮಹಾದ್ವಾರದಲ್ಲಿ ಹಾಗೂ ಹೈದರಾಬಾದ್ ಜಿಲ್ಲೆಯ ಗೋಲ್ಕಂಡ ಕೋಟೆಯಲ್ಲಿ ಹೆಚ್ಚು ರಿಪೇರಿ ಕೆಲಸಗಳನ್ನು ನಡೆಸಿತು. ವಿಶಾಖಪಟ್ಟಣ ಜಿಲ್ಲೆಯ ಸಾಲಿಹುಂಡಂನಲ್ಲಿರುವ ಬೌದ್ಧಮತದ ಪ್ರಾಚೀನಾವಶೇಷ ಗಳನ್ನು ದುರಸ್ತು ಮಾಡಲಾಗಿದೆ. ರಾಯಪುರ ಜಿಲ್ಲೆಯ ಸಿರ್‌ಪುರದಲ್ಲಿರುವ ಲಕ್ಷ್ಮಣ ದೇವಾಲಯದಲ್ಲಿ ಕೆಲವು ಸುಧಾರಣೆಗಳನ್ನು ನಡೆಸಿದೆ.

ದಕ್ಷಿಣ ಮಂಡಲವು ತಿರಚೂರ್ ಜಿಲ್ಲೆಯ ಮತ್ತಾಂಚೆರಿ ಅರಮನೆಯಲ್ಲಿ ಮರದ ಕೆತ್ತನೆ ಕೆಲಸವನ್ನು ಸಂರಕ್ಷಿಸಿತು. ಚಿಂಗಲ್‌ಪೇಟೆ ಜಿಲ್ಲೆಯ ಮಹಾಬಲಿಪುರಂನಲ್ಲಿರುವ ಪಂಚ ರಥಗಳ ಆವರಣದ ನೆಲವನ್ನು ಒಂದೇ ಮಟ್ಟವಾಗಿ ಮಾಡಿ ಚರಂಡಿಗಳನ್ನು ಅಗಿಸಲಾಯಿತು.

ಉತ್ತರ ಆರ್ಕಾಟ್ ಜಿಲ್ಲೆಯ ವೆಲ್ಲೂರ್ ಕೋಟೆಯಲ್ಲಿ ಗೋಡೆಗಳ ಮೇಲಿನ ಮಣ್ಣಿನ ರಾಶಿಯನ್ನು ತೆಗೆಯುವುದು, ಸ್ಥಳಪಲ್ಲಟವಾದ ಕಲ್ಲುಗಳನ್ನು ಭದ್ರವಾಗಿ ಜೋಡಿಸುವುದು ಮೊದಲಾದ ಸುಧಾರಣೆಗಳು ಕೈಗೊಳ್ಳಲ್ಪಟ್ಟಿವೆ. ತಂಜಾವೂರ್ ಬೃಹದೀಶ್ವರ ದೇವಾಲಯದ ಮುಂಭಾಗದಲ್ಲಿದ್ದ ಮಣ್ಣಿನ ರಾಶಿಗಳನ್ನು ತೆಗೆದುಹಾಕಿ ಅಂಗಣವನ್ನು ಒಂದೇಮಟ್ಟಕ್ಕೆ ತರಲಾಯಿತು.

ಬೆಂಗಳೂರಿನ ಹಳೇ ಡಂರ್ಜ, ಕೋಟೆ ಮತ್ತು ಪ್ರವೇಶ ದ್ವಾರಗಳ ರಿಪೇರಿ ನಡೆಯಿತು. ಹಾಸನ ಜಿಲ್ಲೆ ಶ್ರವಣಬೆಳಗೊಳದಲ್ಲಿರುವ ಅಕ್ಕನ ಬಸ್ತಿಯ ಪ್ರವೇಶದ ಮೇಲಿರುವ ಮಂಡಪದ ಬಿಸಿಲುಮಾಳಿಗೆಯನ್ನು ದುರಸ್ತು ಮಾಡಲಾಯಿತು. ಓರೆಯಾಗಿದ್ದ ಕಂಭಗಳನ್ನು ಪುನಃ

ಮಹ

